# ೨೭ ಘಂಟೆಗಳಲ್ಲಿ

ಮತ್ತು

ಇತರ ಕತೆಗಳು



ಬಿ. ಎಸ್. ವೆಂಕಟರಾವ್



ಪ್ರಕಾಶಕರು :

ಛಾಯಾ ಪ್ರಕಟನಾಲಯ

ದೇಶಬಂಧು ಪ್ರೆಸ್ : ಕೋಟೆ, ಬೆಂಗಳೂರು ನಗರ.

**ಅರ್ಪಣೆ.**

ತಾಯ್ನಾಡಿನ ಸ್ವಾತಂತ್ರ್ಯ
ಸಾಧಿಸಬಲ್ಲ ಏಕಮಾತ್ರ ಶಕ್ತಿ-
ಯುವಜನ ಸ್ಫೂರ್ತಿಗೆ

# ಮೊದಲ ಮಾತು

ನಮ್ಮ ಸಾಮಾಜಿಕ ಜೀವನಕ್ಕೂ, ರಾಜಕೀಯ ಜೀವನಕ್ಕೂ ಇರುವ ನಿಕಟ ಸಂಬಂಧದಿಂದ ನಮ್ಮ ಸಾಹಿತ್ಯವು ಎಂದಿಗೂ ದೂರ ವಾಗದು. ಆಡಳಿತ ಸರ್ಕಾರಗಳ ನೌಕರರಾಗಿರುವ ಅನೇಕ ಮಂದಿ ಸಾಹಿತ್ಯರಂಗಕ್ಕಿಳಿದು, ಗ್ರಂಥಗಳನ್ನು ತಯಾರಿಸಿ ಹಾಕುವ ಒಂದು ಹವ್ಯಾಸ(ಹಾಬಿ) ಇಟ್ಟುಕೊಂಡಿದ್ದಾರೆ. ಆ ತಯಾರಿಕೆಗಾರರಿಂದ ಕನ್ನಡ ಸಾಹಿತ್ಯಪೇಟೆಯಲ್ಲಿ ದೂಡಲ್ಪಟ್ಟ ಗ್ರಂಥಗಳಲ್ಲಿ ಶೇ|| ೭೫ ರಷ್ಟು ಶಾಲಾ ವಿದ್ಯಾರ್ಥಿಗಳ ಪಠ್ಯ ಪುಸ್ತಕಗಳಾಗಿಯೇ ಮಾರಾಟ ಹೊಂದುವುವು. ಆದ್ದರಿಂದ ಆ ಬಗೆಯ ಪಠ್ಯಪುಸ್ತಕ ಸಾಹಿತ್ಯದಲ್ಲಿ ಸಾಮಾಜಿಕ ಮತ್ತು ರಾಜಕೀಯ ಜಾಗೃತಿಯನ್ನು ಪ್ರಚೋದಿಸುವಂತಹ ಅಂಶಗಳು ಸಾಧಾ ರಣವಾಗಿ ತಲೆಹಾಕುವ ಸಂಭವವೇ ಇಲ್ಲ. ಇದಕ್ಕೆ ಕಾರಣವಿಷ್ಟೆ :– ವಿದ್ಯಾರ್ಥಿಗಳಲ್ಲಿ ಸ್ವದೇಶಪ್ರೇಮ ಸ್ವಜನಪ್ರೇಮ ಭಾವನೆಗಳು ಮೊಳೆಯು ವಂತೆ ಸಾಹಿತ್ಯ ಸೃಷ್ಟಿಸಿ – ಪಠ್ಯ ಪುಸ್ತಕಗಳಾಗಿ ಅವರ ಕೈಯಲ್ಲಿಟ್ಟರೆ ಸ್ವಾತಂತ್ರ್ಯವನ್ನರಸುವ 'ಕೆಟ್ಟ' ದಾಹವೆಲ್ಲಿ ಅವರಲ್ಲಿ ಹುಟ್ಟಿಕೊಳ್ಳು ವುದೋ ಎಂಬ ಭೀತಿ, ಮೊದಲನೆಯದು. ಮತ್ತೆ ಆ ಬಗೆಯ ಅನಾ ಹುತಕ್ಕೆ ಎಡೆಗೊಡುವ ಸಾಹಿತ್ಯವನ್ನು ಸೃಷ್ಟಿಸಿ ವಿದ್ಯಾರ್ಥಿಗಳ ಕೈಲಿಟ್ಟು ದಕ್ಕಾಗಿ, ತಾವು ನೌಕರಿಯಲ್ಲಿರುವ ಸರ್ಕಾರದ ಆಕ್ರೋಶಕ್ಕೆಲ್ಲಿ ಪಾತ್ರ ರಾಗುವೆವೊ? ಅಲ್ಲದೆ ಅದರ ಪರಿಣಾಮವಾಗಿ ತಮ್ಮ ನೆಮ್ಮದಿಯ ಜೀವನಕ್ಕೂ, ವೃದ್ಧಾಪ್ಯದ ವೇತನಕ್ಕೂ ಎಲ್ಲಿ ಸಂಚಕಾರ ಬಂದೊದಗು ವುದೋ ಎಂಬ ಬೃಹತ್ ಭೀತಿ, ಎರಡನೆಯದು. ಹೀಗಾಗಿ ನಮ್ಮಲ್ಲಿ ಹಿರಿಯ ಸಾಹಿತಿಗಳೆನಿಸಿಕೊಂಡವರಿಂದ ನಮಗೆ ದೊರೆತಿರುವುದು, ದೊರೆಯುವುದು ಎಲ್ಲ ಸತ್ವಹೀನ ಸಾಹಿತ್ಯವಾಗಿದೆ.

ಆದರೆ ನಮ್ಮ ಜನ, ನಮ್ಮ ಯುವಜನ ಈ ವಂಚನೆಗೆ ಸಿಕ್ಕಿ ತಮ್ಮ ಸಾಮಾಜಿಕ ಮತ್ತು ರಾಜಕೀಯ ಜೀವನಗಳಲ್ಲಿ ಮೊದಲಿಗೆ ಹಿಂದುಳಿಯುವ ದಂಡತೆತ್ತರೂ, ಜಾಗೃತ ಪರಪ್ರಾಂತೀಯ ಸಾಹಿತ್ಯ ದಿಂದ, ಜನರ ಸಂಪರ್ಕದಿಂದ ಈಗ ಸ್ವತಃ ಎಚ್ಚರಗೊಂಡಿದ್ದಾರೆ; ಜಾಗೃತರಾಗುತ್ತ ಮುಂದುವರಿಯುತ್ತಲೂ ಇದ್ದಾರೆ. ಅದಕ್ಕನುಗುಣ ವಾಗಿ ಯುವಜನಸ್ತೋಮ ತನ್ನ ಮುಂದಿನ ಭವ್ಯ ಜೀವನಕ್ಕೆ ಅಡಿಗಲ್ಲಾಗುವಂತಹ ಸತ್ವಯುತ ಸಾಹಿತ್ಯವನ್ನು ರಚಿಸಿ, ನಮ್ಮ ಸಾಮಾಜಿಕ ಮತ್ತು ರಾಜಕೀಯ ಜೀವನದ ಪ್ರಗತಿಯನ್ನು ಸಾಧಿಸುವ ಹಂಬಲದಿಂದ ಕೂಡಿ ಶ್ರಮಿಸುತ್ತಿರುವರೆಂಬುದಕ್ಕೆ ಈಗಾಗಲೇ ಸಾಕಷ್ಟು ನಿದರ್ಶನಗಳು ದೊರೆತಿವೆ.

ನಮ್ಮ ಈ ದ್ವಿಮುಖ ಜೀವನದಲ್ಲಿ ಅನೇಕ ಸಮಸ್ಯೆಗಳು ಎದುರಾಗಿ ಪ್ರಗತಿಯು ಸಾಧ್ಯವಾಗದಂತಾಗಿದೆ. ಆ ಸಮಸ್ಯೆಗಳ ಪರಿಹಾರವಾಗಬೇಕು; ಅದಕ್ಕೆ ಯುವಜನರಲ್ಲಿ ಕಲ್ಪನಾಶಕ್ತಿ, ಭಾವನಾ ವೈಶಾಲ್ಯ, ವಿಚಾರಶಕ್ತಿ ಮತ್ತು ಸುಧಾರಣೆಗಳನ್ನು ಸುಸಂಘಟಿತರಾಗಿ ಸಾಧಿಸುವ ಕಾರ್ಯೋನ್ಮುಖತೆ ಬೇಕಾದಂತಿವೆ. ಅವುಗಳಿಗೆ ವಿಶ್ರಾಂತಿ ಕೊಡದೆ ಯುವಜನರು ಕಾರ್ಯವಾಸಿಗಳಾಗಿ ಮುಂದುವರಿಯಲು ಅಲ್ಪ ಸ್ವಲ್ಪವಾದರೂ ನೆರವಾಗಲೆಂದು 'ಛಾಯಾ ಬಳಗ'ದ ಯುವಜನರ ಒಂದು ತಂಡ '**ಛಾಯಾ ಭಂಡಾರ'ದ** ಮೊದಲ ಪ್ರಕಟಣೆಯನ್ನು ಹೊರಗಿಟ್ಟಿದೆ.

೧೯೪೪

ವ್ಯವಸ್ಥಾಪಕ

**ಛಾಯಾ ಪ್ರಕಟನಾಲಯ.**

# ೨೭ ಘಂಟೆಗಳಲ್ಲಿ

**ಬೆ**ಳಗ್ಗೆ ಎಂಟೂಕಾಲು ಘಂಟೆಯಾಗಿತ್ತು. ಪೂನಾ ಎಕ್ಸ್‌ಪ್ರೆಸ್ ಗಾಡಿಯು ಮದ್ರಾಸ್ ಸೆಂಟ್ರಲ್ ಸ್ಟೇಷನ್ನಿನಿಂದ ಕದಲಲು ಇನ್ನೇನು ಎರಡು ಮೂರು ನಿಮಿಷಗಳು ಮಾತ್ರವೇ ಉಳಿದಿದ್ದವು. ಗಿರೀಶನು ಅವಸರವಸರವಾಗಿ ಕೂಲಿಯವನಿಂದ ತನ್ನ ಹೋಲ್ಡಾಲ್, ಸ್ಯೂಟ್ ಕೇಸ್, ಹಣ್ಣಿನಬುಟ್ಟಿ, ನೀರಿನ ಕೂಜ ಇವುಗಳನ್ನು ಹೊರಿಸಿಕೊಂಡು 'ಸೆಕೆಂಡ್‌ಕ್ಲಾಸ್ ಕಂಪಾರ್ಟ್‌ಮೆಂಟ'ನ್ನು ರೈಲಿನ ಒಂದು ಕೊನೆಯಿಂದ ಹುಡುಕಿಕೊಂಡು ಬೇಗಬೇಗನೆ ನಡೆದ. ಅವನಿಗೆ ಮೊದಲು ಸಿಕ್ಕಿದ ಮೂರು 'ಕಂಪಾರ್ಟ್‌ಮೆಂಟು'ಗಳ ಪೈಕಿ ಒಂದರಲ್ಲಿ ಪರಂಗಿಯವರಿದ್ದರು ; ಮತ್ತೊಂದು ಕೇವಲ ಇಬ್ಬರಿಗೆ ಮಾತ್ರ ಜಾಗ ಒದಗಿಸಲ್ಪಟ್ಟಿದ ಕಂಪಾರ್ಟ್‌ಮೆಂಟು. ಅದರಲ್ಲಿ ಒಂದು 'ಬರ್ತ್' ಖಾಲಿ ಇತ್ತು. ಇನ್ನೊಂದು 'ಬರ್ತ'ನ್ನು ತರುಣ ದಂಪತಿಗಳು ಆಕ್ರಮಿಸಿಕೊಂಡಿದ್ದರು. ಅಲ್ಲಿ ಕೂಡಲು ಮನಸ್ಸೊಪ್ಪದೆ ಗಿರೀಶನು ಮುಂದಿನ ಕಂಪಾರ್ಟ್‌ಮೆಂಟಿಗೆ ಹೋದ. ಅದು ಭರ್ತಿಯಾಗಿ ಹೋಗಿದ್ದುದರಿಂದ ಇನ್ನೂ ಮುಂದೆ ಹೊರಡುವುದರಲ್ಲಿದ್ದನು. ಆದರೆ ಕೂಲಿಯವನು 'ಪೋದಾಚಿ ; ಇಂಗೆಯೇ ವಾ ದೊರೆ' ಎಂದು ಅವಸರದಲ್ಲಿ ಎರಡನೆಯ ಚಿಕ್ಕ ಕಂಪಾರ್ಟ್‌ಮೆಂಟಿಗೇ ಸಾಮಾನುಗಳನ್ನಿರಿಸಿಬಿಟ್ಟ. ಆ ವೇಳೆಗೆ ಗಾರ್ಡು ಶೀಟಿ ಹಾಕಲು ಗಿರೀಶನು ಬೇರೆ ಮಾರ್ಗವೇ ಇಲ್ಲದೆ ಕೂಲಿಯವನ ಸಲಹೆಯನ್ನೇ ಅಂಗೀಕರಿಸಬೇಕಾಯಿತು. ಅವನು ಗಾಡಿ ಹತ್ತುವುದಕ್ಕೂ ರೈಲು ಕದಲುವುದಕ್ಕೂ ಸರಿಹೋಯಿತು.

ಆ 'ಕಂಪಾರ್ಟ್‌ಮೆಂಟ'ನಲ್ಲಿ ಮೊದಲೇ ಕುಳಿತಿದ್ದ ತರುಣ-ತರುಣಿಯರು ಒಂದು ಕ್ಷಣ ಗಿರೀಶನ ಮೇಲೆ ದೃಷ್ಟಿ ಬೀರಿದರು.

ಗಿರೀಶನೂ ಅದೇ ರೀತಿ ತನ್ನ ದೃಷ್ಟಿಯನ್ನು ಹರಿಸಿ ಮತ್ತೆ ತನ್ನ ಸಾಮಾನುಗಳ ಕಡೆಗೆ ಹೊರಳಿಸಿದನು. 'ಸ್ಯೂಟ್‌ಕೇಸು', ಹಣ್ಣಿನ ಬುಟ್ಟಿ, ನೀರಿನ ಕೂಜಾಗಳನ್ನು ಒಂದು ಬದಿಗಿರಿಸಿ 'ಹೋಲ್ಡಾಲ'ನ್ನು ಖಾಲಿ ಇದ್ದ 'ಬರ್ತ'ನ ಮೇಲಿಟ್ಟುಕೊಂಡು ಬಿಚ್ಚಿ, ಹಾಸಿಗೆ ಹಾಸಿ ಕೊಂಡು ಕುಳಿತು ಮತ್ತೊಮ್ಮೆ ತನ್ನ ಸಹಪ್ರಯಾಣೀಕರ ಕಡೆ ನೋಡಿದ. ತರುಣಿಯು ಮೊದಲು ತನ್ನ ಕಡೆಗೆ ದೃಷ್ಟಿ ಬೀರಿದ್ದಾಗಲೇ, ಆಕೆಗೆ ತಾನಲ್ಲಿ ನುಗ್ಗಿದ್ದರಿಂದ ಅಸಮಾಧಾನವುಂಟಾಯಿತೆಂಬ ಸೂಚನೆಯನ್ನು ಆಕೆಯ ಮುಖಭಾವದಿಂದಲೇ ತಿಳಿದುಕೊಳ್ಳುವಷ್ಟು ಸೂಕ್ಷ್ಮಬುದ್ಧಿ ಗಿರೀಶನಿಗಿತ್ತು. ಆದರೆ ಆ ಅಸಮಾಧಾನದಿಂದ ಅವನಿಗೂ ಸ್ವಲ್ಪ ಒಳಗೇ ರೇಗಿತು. ಅವರು ಅಲ್ಲಿ ಕೂಡಲು ಎಷ್ಟು ಬಾಧ್ಯರೋ ಅಷ್ಟೇ ತಾನೂ ಬಾಧ್ಯನೆಂದುಕೊಂಡೇ ಅವನು ಮತ್ತೊಮ್ಮೆ ಅವರಕಡೆ ನೋಡಿದ್ದು. ತರುಣಿಯು ತನ್ನ ಮುಖವನ್ನು ಕಿಟಕಿಯಕಡೆ ತಿರುಗಿಸಿಕೊಂಡು ಹೊರಗಿನ ಗಿಡಮರಗಳನ್ನು ನೋಡು ತ್ತಿದ್ದಳು. ಆಕೆಯೊಂದಿಗಿದ್ದ ತರುಣನು ಗಿರೀಶನು ಮಾಡುತ್ತಿದ್ದುದ ನ್ನೆಲ್ಲ ನೋಡುತ್ತಿದ್ದನು. ಗಿರೀಶನು ಕುಳಿತು ತನ್ನ ಕಡೆ ದೃಷ್ಟಿಬೀರು ತ್ತಲೇ ಆತನು ಸ್ವಲ್ಪ ಹುಸಿನಗೆ ಬೀರಿ, 'ಎಲ್ಲಿಯವರೆಗೆ ನಿಮ್ಮ ಪ್ರಯಾಣ?' ಎಂದು ಇಂಗ್ಲೀಷಿನಲ್ಲಿ ಸಂಭಾಷಣೆ ಆರಂಭಿಸಿದ.

"ಬೊಂಬಾಯಿಯವರೆಗೆ" ಎಂದು ಗಿರೀಶನು ಉತ್ತರಕೊಟ್ಟು, "ನೀವೆಲ್ಲಿಗೆ ಹೋಗುವಿರಿ?" ಎಂದು ಕೇಳಿದ.

"ನಾವೂ ಬೊಂಬಾಯಿಗೇ ಹೊರಟಿದ್ದೇವೆ."

"ಓ! ಹಾಗಿದ್ದರೆ ನಾನು ನಿಮಗೀ 'ಬರ್ತ'ನ್ನ ಸಂಜೆ ಗುಂತಕಲ್ ಸ್ಟೇಷನ್ನಿನಲ್ಲಿ ಖಾಲೀ ಮಾಡಿಕೊಡ್ತೇನೆ."

"ಅದೇನು ಪರವಾಯಿಲ್ಲ. ನೀವೇನೂ ತೊಂದರೆ ತಕೋಬೇಡಿ."

" ಅಯ್ಯೋ ! ಹಾಗುಂಟೆ ? ನೀವೂ ಬಹಳ ದೂರ ಪ್ರಯಾಣ ಮಾಡೋರು ; ಅಲ್ಲದೆ ಈ ಜಾಗಕ್ಕೆ ನೀವೇಮೊದಲು ಬಂದಿದ್ದಿರಾದ್ರಿಂದ ನಿಮಗೇ ಇದರ ಮೇಲೆ ಹಕ್ಕು ಹೆಚ್ಚು. ನಿಮಗೆ ರಾತ್ರಿ ಮಲಗಲು ಈ 'ಬರ್ತು' ಬೇಕೇಬೇಕಾಗುತ್ತೆ. ನನ್ನಿಂದ ನಿಮಗೆ ತೊಂದರೆ ಯಾಗುವುದು ಸರಿಯಲ್ಲ."

" ಅದಕ್ಕಾಗಿ ನೀವೇನೂ ಚಿಂತೆಮಾಡಬೇಡಿ. ಒಂದೇ ಬರ್ತಿನಲ್ಲೇ ನಾವು ಸುಧಾರಿಸಿಕೊಳ್ತೇವೆ " ಎಂದಾತ ಉತ್ತರ ಕೊಟ್ಟ. ತರುಣಿಯು ತಟಕ್ಕನೆ ಆತನ ಮುಖ ನೋಡಿದಳು. ಆತನ ಮುಖದಲ್ಲಿ ಸ್ವಲ್ಪ ಮಾರ್ಪಾಟಾಯಿತು. ಆತನ ಮಾತು ಅವಳಿಗೆ ಹೇಗೆ ಅರ್ಥವಾಗಲಿಲ್ಲವೋ ಹಾಗೆಯೇ, ಗಿರೀಶನಿಗೂ ಅರ್ಥವಾಗಲಿಲ್ಲ. ಆದರೆ ಅವನದನ್ನು ವಿಶೇಷವಾಗಿ ತಲೆಗೆ ಹಚ್ಚಿಕೊಳ್ಳದೆ 'ಸರಿ ಹಾಗಾದರೆ' ಎಂದು ತನ್ನ ತಲೆದಿಂಬಿನ ಅಡಿಯಲ್ಲಿದ್ದ 'ಮಾಸಪತ್ರಿಕೆ' ಗಳನ್ನು ಹೊರಕ್ಕೆಳೆದುಕೊಂಡು, ಸರಿಯಾಗಿ ಒರಗಿ ಕೂಡಲು ದಿಂಬುಗಳನ್ನು ಜೋಡಿಸಿ ಓದುತ್ತ ಕುಳಿತ.

ಗಾಡಿಯು ಆರಕೋಣಂ ಸ್ಟೇಷನನ್ನು ದಾಟಿ, ರೇಣಿಗುಂಟದಲ್ಲಿ ೧೦-೪೮ ಕ್ಕೆ ಬಂದು ನಿಂತಿತು. ಅಲ್ಲಿ ಆತನು 'ಕಾಫಿ ತರಿಸಲೇ' ಎಂದು ತರುಣಿಯನ್ನು ಕೇಳಿದ. ಆಕೆಯು ಬೇಡವೆನ್ನದಿದ್ದರೂ, 'ಇವರು ಬೇರೆ ಕುಳಿತಿದ್ದಾರಲ್ಲಾ?' ಎನ್ನುವ ಅಭಿಪ್ರಾಯ ಬರುವಂತೆ ತನ್ನ ಕಣ್ಣುಗಳನ್ನು ಗಿರೀಶನ ಕಡೆ ಹೊರಳಿಸಿ ವ್ಯಕ್ತಪಡಿಸಿದಳು. ಆತನೂ 'ಇದ್ದರೇನು ಪರವಾಯಿಲ್ಲ' ಎನ್ನುವ ಅರ್ಥ ಕೊಡುವಹಾಗೆ ಲೊಚಗುಟ್ಟಿ, 'ಉಪಾಹಾರದ ಗಾಡಿ'ಯ ಆಳಿನ ಗಮನವನ್ನು ತನ್ನ ಕಡೆಗೆ ಸೆಳೆದುಕೊಂಡು, ಅವನಿಗೆ ಮೂರು ಬಟ್ಟಲು ಕಾಫಿ ತರುವಂತೆ ಹೇಳಿದ. ಕಾಫಿ ಬಂದಮೇಲೆ ಆತನು ತರುಣಿಗೆ ಒಂದು ಬಟ್ಟಲನ್ನು ಕೊಡಲುಹೋದ. ಆಕೆಯು 'ಅವರಿಗೆ ಮೊದಲು ಕೊಡಿ' ಎಂದು ಮೆಲ್ಲನುಸುರಿದಳು. ಆತನು ಅದೇ ಬಟ್ಟಲನ್ನೇ ಕೈಯಲ್ಲಿ ಹಿಡಿದು

ಕೊಂಡು 'ತಕೊಳ್ಳಿ ಸಾರ್' ಎಂದು ಗಿರೀಶನ ಗಮನವನ್ನು ಸೆಳೆದನು. ಗಿರೀಶನು ಪತ್ರಿಕೆಯಿಂದ ತಲೆಯನ್ನೆತ್ತಿ ಹೊರಳಿಸಿ ನೋಡಿ, 'ದಯವಿಟ್ಟು ಕ್ಷಮಿಸಿ; ನಾನೀ ಬೆಳಿಗ್ಗೆ ಸ್ವಲ್ಪ ಹೆಚ್ಚಾಗಿಯೇ ಕಾಫಿ ಕುಡಿದುಬಿಟ್ಟಿದ್ದೇನೆ' ಎಂದುತ್ತರ ಕೊಟ್ಟ.

"ಇರಲಿ ಇನ್ನೊಂದು ಬಟ್ಟಲು ಹೆಚ್ಚಾಗಿ ತಾನೇ ಕುಡಿದೀರಿ; ಇದರಿಂದ ನಿಮಗೇನೂ ಬಾಧಕವಿಲ್ಲ ತಕೊಳ್ಳಿ" ಎಂದಾತ ಒತ್ತಾಯ ಪೂರ್ವಕವಾಗಿ ಗಿರೀಶನಿಗೆ ಕೊಟ್ಟು ಉಳಿದೆರಡು ಬಟ್ಟಲುಗಳಲ್ಲಿ ಒಂದು ಬಟ್ಟಲನ್ನು ತೆಗೆದುಕೊಂಡ. ಕಾಫಿ ಕುಡಿಯುತ್ತ ಆತನು ರೈಲ್ವೆ ಪ್ರಯಾಣಿಕರಿಗೆ ಸ್ವಭಾವ ಸಹಜವಾದ ರೀತಿಯಲ್ಲಿ ಮಾತಿಗಾರಂಭಿಸಿ, ಗಿರೀಶನ ಹೆಸರು, ಕುಲ-ಗೋತ್ರ, ಉದ್ಯೋಗ, ಉತ್ಪನ್ನಗಳನ್ನೆಲ್ಲ ಕೇಳಲಾರಂಭಿಸಿದ. ಸಾಕಷ್ಟು ರೈಲ್ವೆ ಪ್ರಯಾಣದ ಅನುಭವ ಪಡೆದಿದ್ದ ಗಿರೀಶನು ಹೆಚ್ಚು ಮಾತನ್ನು ಖರ್ಚು ಮಾಡಲೆಳಸದೆ ತನ್ನ ಕೋಟಿನ ಕಿಸೆಯಿಂದ ಒಂದು 'ವಿಸಿಟಿಂಗ್ ಕಾರ್ಡ್' ತೆಗೆದು ಆತನ ಕೈಲಿಟ್ಟು, 'ನೀವು ಯಾವ ಊರಿನವರು? ನಿಮ್ಮ ಹೆಸರೇನು?" ಎಂದು ಮುಂತಾಗಿ ಪ್ರಶ್ನಿಸಿದ. ಅದಕ್ಕಾತನು ಉತ್ತರಕೊಟ್ಟಾಗ ತರುಣಿಯು ಕಿಟಕಿಯಿಂದ ತನ್ನ ಮುಖವನ್ನೆತ್ತಿ ಆತನಕಡೆಗೊಮ್ಮೆ ಚಕಿತಳಾಗಿ ನೋಡಿ, ಮತ್ತೆ ತನ್ನ ದೃಷ್ಟಿಯನ್ನು ಕಿಟಕಿಗೇ ತಿರುಗಿಸಿದಳು. ಆಕೆಯ ಮುಖದಲ್ಲಿ ಆಗ ಆಶ್ಚರ್ಯ ಭಾವವು ಮೂಡಿದುದನ್ನು ಕಂಡ ಗಿರೀಶನಿಗೆ ಆತನು ನಿಜ ಹೇಳುತ್ತಿಲ್ಲವೆಂದೂ, ಏಕೋ ತನ್ನ ನಿಜನಾಮಧೇಯ, ಊರು, ಉದ್ಯೋಗಗಳನ್ನು ಹೇಳಲು ಮರೆಮಾಚಿದನೆಂದೂ ಹೊಳೆಯಿತು.

ಕಾಫಿ ಕುಡಿದಮೇಲೆ, ಅಥವಾ ಊಟವಾದಮೇಲೆ ಒಂದು ಸಿಗರೇಟನ್ನು ಹಚ್ಚುವ ಅಭ್ಯಾಸ ಗಿರೀಶನಿಗಿತ್ತು. 'ಕಂಪಾರ್ಟ್‌ಮೆಂಟಿ' ನಲ್ಲಿ ಮಹಿಳೆಯೊಬ್ಬಳಿದ್ದುದರಿಂದ ಅವನು ಮರ್ಯಾದೆಗಾಗಿ ಸ್ವಲ್ಪ ಹೊತ್ತು ಸುಮ್ಮನಿದ್ದ. ಆದರೆ ಅಭ್ಯಾಸಬಲದ ಒತ್ತಾಯ ಹೆಚ್ಚಾದ್ದರಿಂದ

ಅವನು ಕಿಸೆಯಿಂದ ಸಿಗರೇಟ್ ಪೆಟ್ಟಿಗೆಯನ್ನು ತೆಗೆದುಕೊಂಡು, 'ನಾನು ಸಿಗರೇಟು ಸೇದುವವ; ನಿಮ್ಮ ಪತ್ನಿಯ ಆಕ್ಷೇಪಣೆಯಿಲ್ಲದಿದ್ದರೆ ನಾನೊಂದು ಸಿಗರೇಟ್ ಹಚ್ಚಿಕೊಳ್ಳುತ್ತೇನೆ' ಎಂದಾತನ ಅನುಮತಿಯನ್ನು ಬೇಡಿದ. ತರುಣಿಯು ಮೊದಲನೆಯಬಾರಿ, ಗಿರೀಶನ ಕಡೆ ನೋಡಿ ಕಿರುನಗೆ ಬೀರುತ್ತ, 'ನನ್ನದೇನೂ ಆಕ್ಷೇಪಣೆಯಿಲ್ಲ; ನೀವು ಸಿಗರೇಟನ್ನು ಹಚ್ಚಿಕೊಳ್ಳಬಹುದು' ಎಂದಳು. ಹಿಂದೆಯೇ ಆತನು, 'ಈಕೆ ನನ್ನ ತಂಗಿ; ಹೆಂಡತಿಯಲ್ಲ' ಎಂದುಬಿಟ್ಟ. ತರುಣಿಯ ಮುಖದಲ್ಲಿದ್ದ ಕಿರುನಗೆಯು ಮಾಯವಾಯಿತು. ಆತನ ಕಡೆ ಮುಖ ತಿರುಗಿಸಿದಳು; ಆತನ ಮಾತುಕತೆಗಳೇಕೊ ಒಂದು ಬಗೆಹರಿಯದ ಸಮಸ್ಯೆಯಾಗಿ ಅವಳಿಗೆ ಕಂಡಿತು. ಆದರೆ ಆಕೆಗೆ ಮುಖತೋರಿಸುವ ಧೈರ್ಯ ಆತನಿಗಿರಲಿಲ್ಲ. ಗಿರೀಶನು ಸಿಗರೇಟು ಹಚ್ಚಿಕೊಳ್ಳುವ ಉದ್ಯಮದಲ್ಲಿ ಅವರಿಬ್ಬರ ಮುಖಭಾವಗಳನ್ನೂ ಕಂಡು, ತನ್ನ ಪತ್ರಿಕೆಗಳ ಕಡೆಗೆ ಗಮನಕೊಡಲು ಪ್ರಯತ್ನಿಸಿದ. ಮತ್ತೆ ಯಾರಬಾಯಿಂದಲಾಗಲಿ ಒಂದು ಮಾತೂ ಹೊರಡಲಿಲ್ಲ.

ಗಿರೀಶನ ದೃಷ್ಟಿ ಪತ್ರಿಕೆಯಮೇಲಿದ್ದರೂ, ಮನಸ್ಸೆಲ್ಲೋ ಇತ್ತು. ರೈಲು ನಂದಲೂರು ಸ್ಟೇಷನ್ನಿಗೆ ಬಂದು ನಿಂತಿತು. ಗಿರೀಶನು ಸ್ವಲ್ಪ ನಡೆದಾಡಿಕೊಂಡು ಬರಬೇಕೆಂದಿಚ್ಛಿಸಿ ಗಾಡಿಯಿಂದಿಳಿದುಹೋದ. ಅವನು ತನ್ನ 'ಕಂಪಾರ್ಟ್‌ಮೆಂಟ'ನಿಂದ ಬಹಳ ದೂರದವರೆಗೂ ಹೋಗುವಹಾಗಿರಲಿಲ್ಲ. ಆದ್ದರಿಂದ ಹತ್ತಿರಲೇ ಇಲ್ಲಿಂದಲ್ಲಿಗೆ ಓಡಾಡಲಾರಂಭಿಸಿದ. ಅವನು ತನ್ನ 'ಕಂಪಾರ್ಟ್‌ಮೆಂಟ'ನ ಬಳಿ ಬಂದ ಪ್ರತಿಸಲವೂ ಅವನಿಗೆ ನಾಲ್ಕಾರುಮಾತು ಕಿವಿಗೆಬೀಳುತ್ತಿತ್ತು. ಇವನ ತಲೆ ಕಾಣುತ್ತಲೇ ಅವರಿಬ್ಬರ ಮಾತು ನಿಲ್ಲುತ್ತಿತ್ತು. ಒಂದುಬಾರಿ ಗಿರೀಶನು, 'ಸರಿ! ಅವನಿಗೆ ಶಾಸ್ತಿಯಾಗ್ತಾ ಇದೆ' ಎಂದುಕೊಂಡ. ಮತ್ತೊಮ್ಮೆ, 'ಹುಂ! ಏನೋ ಸಮಾಧಾನ ಹೇಳಿದ್ದಾನೆ. ಇನ್ನು ಪರವಾಯಿಲ್ಲ. ಹೋಗಿ ಕೂಡಬಹುದು' ಎಂದು ತನ್ನ ಜಾಗಕ್ಕೆ

ಹಿಂತಿರುಗಿದ. ‘ ಕಂಪಾರ್ಟ್‌ಮೆಂಟ್ ’ನ ವಾತಾವರಣದಲ್ಲಿ ಸ್ವಲ್ಪ ಬದಲಾವಣೆಯಾಗಿತ್ತು. ಆತನು ಗಿರೀಶನೊಂದಿಗೆ ಅದೂ ಇದೂ ಮಾತನಾಡಲಾರಂಭಿಸಿ, ವಾರ್ತಾಪತ್ರಿಕೆಗಳ ವಿಚಾರ ತೆಗೆದನು. ತರುಣಿಯೂ ಮಧ್ಯೆ ಮಧ್ಯೆ ತನ್ನದೂ ಒಂದೊಂದು ಮಾತು ಹಾಕುತ್ತಿದ್ದಳು.

ಮಧ್ಯಾಹ್ನ ಒಂದೂವರೆ ಘಂಟೆಯವೇಳೆಗೆ ರೈಲು ಕಡಪಾಕ್ಕೆ ಬಂದು. ಆತನು ‘ ರೆಫ್ರೆಷ್‌ಮೆಂಟ್ ಕಾರಿ ’ನ ಮಾಣಿಗೆ ಹೇಳಿ ಮೂರು ಮಂದಿಗೆ ಸಾಕಷ್ಟು ಊಟ ತರಲು ಹೇಳಿದ. ಗಿರೀಶನು ‘ ಇಲ್ಲ ! ನನ್ನ ಯೋಚನೆ ನಿಮಗೆ ಬೇಡ. ನಾನೀಗ ಕೇವಲ ಕಾಫಿ ತಿಂಡಿ ಮಾತ್ರ ತೆಗೆದುಕೊಳ್ಳೇನೆ. ಸಾಧಾರಣವಾಗಿ ನಾನು ರೈಲು ಪ್ರಯಾಣ ಮಾಡುವಾಗ ಊಟಮಾಡುವುದಿಲ್ಲ ’ವೆಂದ. ತರುಣಿಯು, ‘ ಸಾಧಾರಣವಾಗಿ ತಾನೆ ? ಈಗ ನಮ್ಮ ಜೊತೆಯಲ್ಲಿದ್ದೀರಿ; ನಮ್ಮೊಂದಿಗೆ ಊಟಮಾಡಿದರೆ ನಿಮಗೇನೂ ಅಜೀರ್ಣವಾಗದು ’ ಎಂದು ನಗುತ್ತ ನುಡಿದಳು. ಗಿರೀಶನು ಏನೋ ಹೇಳಬೇಕೆಂದು ಬಾಯ್ತೆಗೆದ. ಆದರೆ ಮನಸ್ಸಿಗೇನು ಹೊಳೆಯಿತೊ ಮರುಕ್ಷಣವೇ ಸುಮ್ಮನಾಗಿಬಿಟ್ಟ.

ಗೂಟಿಯಲ್ಲಿ ಗಿರೀಶನು ಕೆಳಗಿಳಿದು ಹೋದಾಗ, ಆತನೂ ಅವನನ್ನು ಹಿಂಬಾಲಿಸಿದ. ಪ್ಲಾಟ್‌ಫಾರಮ್ಮಿನ ಮೇಲೆ ಇಬ್ಬರೂ ನಡೆದಾಡುತ್ತಿದ್ದಾಗ, ಆತನು ಗಿರೀಶನ ಮುಖಭಾವವನ್ನೊಮ್ಮೆ ಪರೀಕ್ಷಿಸಿ ‘ನಿಮ್ಮೊಂದಿಗೆ ಒಂದು ವಿಚಾರ ಹೇಳಬೇಕೆಂದಿದ್ದೇನೆ’ ಎಂದ. ಗಿರೀಶನು ಆತನ ಕಡೆ ನೋಡಿ, ಮತ್ತೆ ತಲೆ ತಿರುಗಿಸಿಕೊಂಡು, ‘ ಏನು ಹೇಳಿ ’ ಎಂದ

“ ನೀವು ಮನಸ್ಸಿಗೇನು ತಿಳಿದುಕೊಂಡಿರೋ. ಆಕೆ........ನನ್ನ ತಂಗಿಯೂ ಅಲ್ಲ.”

“ ಅದು ನನಗೆ ಗೊತ್ತು.”

"........ನನ್ನ ಹೆಂಡತಿಯೂ ಅಲ್ಲ."

"ಅದನ್ನು ನಾನಾಗಲೇ ಊಹಿಸಿದೆ."

"ನನ್ನ ಬಗ್ಗೆ ನೀವು ತಪ್ಪು ಅಭಿಪ್ರಾಯವಿಟ್ಟುಕೊಂಡಿದ್ದೀರಿ."

"ನಾನ್ಯಾವ ಅಭಿಪ್ರಾಯಾನೂ ವ್ಯಕ್ತಪಡಿಸಲಿಲ್ಲವಲ್ಲ? ಅದೂ ಅಲ್ಲದೆ ನಿಮ್ಮಗೊಡವೆ ನನಗೇಕೆ? ನೀವು ತಾನೇ ಇದನ್ನೆಲ್ಲ ನನಗೆ ಹೇಳಬೇಕಾದ ಪ್ರಮೇಯವೇನು?"

"ಹಾಗಲ್ಲ! ನಾನು ಯಾವುದೋ ಹುಡುಗೀನ ಅಪಹರಿಸಿ ಕೊಂಡು ಹೋಗ್ತಿದ್ದಿನೀಂತ ನೀವೆಲ್ಲಾದರೂ ಭಾವಿಸಿಕೊಂಡಿರ್‍ೋ ಏನೋಂತ........"

"ಯಾರೇನು ಭಾವಿಸಿದರೆ ತಾನೇ ನಿಮಗೇನು ನಷ್ಟ."

"ಅದು ಸರಿ! ನನಗೇನೂ ಅದರಿಂದ ನಷ್ಟವಿಲ್ಲ. ಆದರೆ ಈ ಹುಡುಗಿ ನನ್ನ ಕುತ್ತಿಗೆಗೆ ಒಂದು ಹೊರಳುಕಲ್ಲು ಗಂಟುಬಿದ್ದಹಾಗೆ ಬಿದ್ದಿದ್ದಾಳೆ. ಊರೂರು ಸುತ್ತೋ ನಿಮಿಗೆ ನಾನೇನು ಹೇಳಬೇಕಾ ಗಿಲ್ಲವಲ್ಲ. ನಿಮಗೆ ಯಾವಳಾದರೊಬ್ಬ ಹುಡುಗಿ ಕಣ್ಣಿಗೆ ಬೀಳ್ತಾಳೆ; ಅವಳಿಗೂ ನಿಮ್ಮಮೇಲೆ ಮನಸ್ಸು ಬೀಳುತ್ತೆ; ನೀವೂ ಅವಳನ್ನ 'ಲೈಕ್'ಮಾಡ್ತೀರಿ. ಅದರಿಂದ ಒಂದು 'ಟೆಂಪರರಿ ಫ್ರೆಂಡ್‌ಷಿಪ್' ಬೆಳೆಯುತ್ತೆ. ಆದರದು 'ಬೈಂಡಿಂಗ್' ಆಗೊಲ್ಲ. ಹಾಗೆ ಇದೊಂದು ನನ್ನ ಅನುಭವ. ಅವಳನ್ನ ಮದುವೆ ಮಾಡಿಕೊಳ್ಳಬೇಕಂತೆ. ಅದು ನನ್ನಿಂದ ಅಸಾಧ್ಯ."

"ಇದನ್ನೆಲ್ಲಾ ನನಗೇಕೆ ಹೇಳ್ತೀರಿ? ನಿಮ್ಮ ಸಂಬಂಧ, ಅಥವಾ ನಿಮ್ಮ ಕಷ್ಟ-ನಿಷ್ಠೂರಗಳನ್ನು ಕಟ್ಟಿಕೊಂಡು ನನಗೇನಾಗಬೇಕಾಗಿದೆ?"

"ನಿಮ್ಮಿಂದ ನನಗೊಂದುಪಕಾರವಾಗಬೇಕಿದೆ. ಅದರಿಂದ ಇಷ್ಟೆಲ್ಲ........"

"ದಯವಿಟ್ಟು ನನ್ನ ಇದಕ್ಕೆಲ್ಲ ಎಳೀಬೇಡಿ. ಇನ್ನೊಬ್ಬರ ವ್ಯವಹಾರವನ್ನ ನನ್ನ ತಲೇಗೆ ಕಟ್ಟಿಕೊಳ್ಳೋ ಸ್ವಭಾವ ನನಗಿಲ್ಲ".

"ನಿಮಗೇನೂ ನಾನು ತೊಂದರೆ ಕೊಡೊಲ್ಲ. ಅವಳಿಂದ ದೂರವಾಗಬೇಕೂಂತ ಪ್ರಯತ್ನಪಡ್ತಿದೇನೆ. ಆದರೆ ಅವಳೆದುರಿಗೆ ಮಾತನಾಡುವುದಕ್ಕಾಗುವುದಿಲ್ಲ.''

"ಏಕೆ? ನಿಮ್ಮನ್ನು ತಿಂದುಬಿಡುವಳೇನು? ನಿನ್ನ ಮದುವೆ ಯಾಗೋದು ನನ್ನಿಂದ ಸಾಧ್ಯವಿಲ್ಲಾಂತ ಬಾಯಿಬಿಟ್ಟು ಹೇಳಿಬಿಡಿ. ಮುಂದೆ ಕಾಲಮೀರಿಬಂದಾಗ ಅವಳ ಕೈಬಿಡೋದಕ್ಕಿಂತ ಈಗಲೇ ಆ ಕೆಲಸಮಾಡಿಬಿಟ್ರೆ ಆಕೆಗೂ ಕ್ಷೇಮ, ಅಲ್ವೇ."

"ಹೌದೌದು! ಅದಕ್ಕಾಗೇ ಈ ಬಾರಿ ಸಿದ್ಧವಾಗಿ ಬಂದಿದ್ದೇನೆ. ಆದ್ದರಿಂದಲೇ ನಿಮ್ಮ ಸಹಾಯಬೇಡಿದ್ದು."

"ಏಕೆ? ಆಕೆ ಸಹವಾಸ ನೀವು ಮೊದಲು ಮಾಡಿದಾಗಲೇ ನಾದರೂ ನಾನು ನೆರವಾಗಿದ್ದೆನೆ?"

"....ಇ....ಇಲ್ಲ!"

"ಮತ್ತೆ ಈಗೇಕೆ ನಾನು? ನಿಮ್ಮ ತುರಿಕೆ; ನೀವೇ ತುರಿಸಿಕೊಳ್ಳಿ...."

"ಅದುಸರಿ ಸಾರ್....! ಆದರೆ As a man to man... ನಿಮ್ಮನ್ನ 'ರಿಕ್ವೆಸ್ಟ್' ಮಾಡಿಕೊಳ್ತೀನೆ....

"ಅದು ಮಾತ್ರ ಮಾಡಬೇಡಿ!"

"ನೀವೊಂದ್ಮಾತು ಆಕೇಗೆ...."

"ನಾನ್ಯಾವ ಮಾತೂ ಆಕೆಗೆ ಹೇಳೋಕೆ ಹೋಗೊಲ್ಲ. ನೀವುಂಟು-ಆಕೆಯುಂಟು."

"ಇಲ್ಲ ಇಲ್ಲ! ನೀವೇನೂ ಹೇಳಬೇಡಿ. ಆಕೆಗೊಂದು ಕಾಗದ ಕೊಡುತ್ತೀನೆ. ಅದನ್ನವಳ ಕೈಗೆಕೊಟ್ಟುಬಿಟ್ಟರಾಯಿತು. ಅಷ್ಟೆ!"

" ನೀವೇನು ಮಾಡ್ತೀರಿ? ನೀವೇ ಏಕೆ ಕೊಡಬಾರದು ?"

"ಅವಳು ಕಾಗದವನ್ನೋದಿ ಜೀರ್ಣಿಸಿಕೊಳ್ಳೋವರೆಗೆ ಬೇರೆ ಯಾವುದಾದರೂ ಕಂಪಾರ್ಟ್‌ಮೆಂಟಿನಲ್ಲಿ ಕುಳಿತಿದ್ದು, ಒಂದೆರಡು ಸ್ಟೇಷನ್ ಕಳೆದ ಮೇಲೆ ಬರ್ತೀನೆ. ನೀವು ಎದುರಿನಲ್ಲೇ ಇರುವಿರಾದ್ರಿಂದ ಗಲಾಟೆಗೇನೂ ಅವಕಾಶವಿರೋದಿಲ್ಲ."

"ನಿಮಗಿದರಲ್ಲಿ ಸಹಾಯಮಾಡೋಕೆ ನನಗೆ ಸ್ವಲ್ಪವೂ ಇಷ್ಟವಿಲ್ಲ. ಆದರೂ ಆಕೆ ಮುಖ ನೋಡಿ....ಈ ಕಾಗದ ಅವಳ ಕೈಗೆ ಸಿಕ್ಕೋಹಾಗೆ ಮಾಡ್ತೇನೆ."

"ಆ ಕಾಗದಾನ ನಾನು ತಲೆದಿಂಬಿನ ಕೆಳಗೆಲ್ಲಾದರೂ ಇಟ್ಟು ಬರಬಹುದಾಗಿತ್ತು. ಆದರೆ ಅವಳ ಕೈಗೆ ಅದು ನಾನು ಬೇರೆ ಜಾಗದಲ್ಲಿ ಕುಳಿತಿದ್ದಾಗ ಸಿಕ್ಕದೆಹೋದರೆ, ಅಥವಾ ಅವಳೊಂದಿಗೆ ನಾನಲ್ಲಿದ್ದಾಗಲೇ ಸಿಕ್ಕಿಬಿಟ್ಟರೆ ಫಜೀತಿಗಿಟ್ಟುಕೊಳ್ಳುತ್ತೆ. ಆದ್ದರಿಂದ ನಿಮಗೆ ಈ ತೊಂದರೆ ಕೊಡಬೇಕಾಯಿತು. ಸ್ನೇಹಿತರಂತೆ ನಿಮ್ಮನ್ನ...."

"ನಾನ್ಯಾರ ಸ್ನೇಹಿತನೂ ಅಲ್ಲ ; ಎಂದಿದ್ರೂ ನಿಮ್ಮಿಂದ ಆಕೆಗೆ ಕೇಡಿದ್ದೇ ಇದೆ. ಮುಂದೆ ಎಂದೋ ತಲೇಮೇಲೆ ಬೀಳೋಕಲ್ಲು ಈಗಲೇ ಬಿದ್ಹೋಗಲೀಂತ ಈ ಕಾಗದಾನ ಅವಳ ಕೈಗೆ ಕೊಡೋಕೆ ಒಪ್ಪಿಕೊಳ್ತೇನೆ" ಎಂದ.

"ಥ್ಯಾಂಕ್ಸ್" ಎಂದುಕೊಂಡು ಆತನು ತನ್ನ ಕಿಸೆಯಲ್ಲಿದ್ದ ಲಕೋಟೆಯೊಂದನ್ನು ಗಿರೀಶನ ಕೈಗಿತ್ತ. ಇಬ್ಬರೂ 'ಕಂಪಾರ್ಟ್‌ಮೆಂಟ್'ಗೆ ಹಿಂತಿರುಗಿದರು. ರೈಲು ಗುಂತಕಲ್ ಸ್ಟೇಷನ್ನಿನಲ್ಲಿ ಹೋಗಿ ನಿಂತಾಗ ಆತನು ಮತ್ತೆ ಗಾಡಿಯಿಂದಿಳಿದು ಹೋದ. ಆಗ ಸಂಜೆ ೫-೨೨ ಘಂಟೆಯಾಗಿತ್ತು. ಆತನು ಇತ್ತಿಂದತ್ತ ಸುತ್ತಾಡುತ್ತಿದ್ದುದನ್ನು ಗಿರೀಶನು ತಾನು ಕುಳಿತಿದ್ದ ಗಾಡಿಯ ಕಿಟಕಿಯಿಂದ ಕಂಡನು. ತರುಣಿಯು ಎದ್ದು, ಸಾಬೂನು, ಟವಲು, ಬಾಚಣಿಗೆ, ಕುಂಕುಮ

ಇವುಗಳನ್ನು ಕೈಪೆಟ್ಟಿಗೆಯಿಂದ ತೆಗೆದುಕೊಂಡು 'ಬಾತ್‌ರೂಮ್'ಗೆ ಹೋಗಿ ಕದವಿಕ್ಕಿಕೊಂಡಳು. ಗಿರೀಶನ ಮನಸ್ಸಿಗದೇನು ಹೊಳೆಯಿತೋ, ಆತನು ಕೊಟ್ಟಿದ್ದ ಲಕ್ಕೋಟೆಯನ್ನು ಕಿಸೆಯಿಂಪ ತೆಗೆದುಕೊಂಡು ಅದನ್ನೊಡೆದು ನೋಡಿದನು. ಒಳಗೆ ಕೆಲವು ೧೦ ರೂ.ಗಳ ನೋಟುಗಳೂ ಮೂರು ೧೦೦ ರೂ. ಗಳ ನೋಟುಗಳೂ, ಒಂದು ಕಾಗದವೂ ಇತ್ತು. ಗಿರೀಶನಿಗೆ ಇದು ಸಂದೇಹವನ್ನುಂಟುಮಾಡಲು ಕಾಗದವನ್ನು ಬಿಚ್ಚಿ ನೋಡಿದ. ತರುಣಿಯ ಹೆಸರು ಶಶಿಯೆಂದೂ, ಆತನ ಹೆಸರು ದೇವರತ್ನನೆಂದೂ ವ್ಯಕ್ತಪಟ್ಟಿತು. ಶಶಿಯು ತನ್ನ ಆಸೆಯನ್ನು ಇನ್ನು ಮುಂದೆ ಇಟ್ಟುಕೊಳ್ಳಬಾರದೆಂದೂ, ಅವಳ ಸಹವಾಸದಿಂದ ತಾನು ತೀರ ಬೇಸರಗೊಂಡಿರುವುದರಿಂದ ತಾನು ಅವಳನ್ನು ಬಿಟ್ಟು ಹೋಗುತ್ತಿರುವುದಾಗಿಯೂ ತನ್ನಿಂದ ಅನರ್ಥವೇನಾದರೂ ಆಗಿದ್ದಲ್ಲಿ ಅದಕ್ಕೆ ಅವಳು ಕಾಗದದೊಂದಿಗಿದ್ದ ಹಣವನ್ನು ಪರಿಹಾರವಾಗಿ ತೆಗೆದುಕೊಳ್ಳಬೇಕೆಂದೂ, ತಾನು ಬೇರೆ ಯಾರನ್ನೋ ಮದುವೆಯಾಗಲೊಪ್ಪಿಗೆಯನ್ನಿತ್ತಿರುವುದಾಗಿಯೂ ಆ ಕಾಗದದಲ್ಲಿ ದೇವರತ್ನನು ತಿಳಿಸಿದ್ದನು.

ಗಿರೀಶನು ಕಾಗದವನ್ನು ಮಡಿಸಿ, ಒಂದು ನಿಮಿಷ ಯೋಚಿಸುತ್ತ ಕುಳಿತ. ಅನಂತರ ತನ್ನ "ಲೆಟರ್ ಕೇಸಿ"ನಿಂದ ಬೇರೊಂದು ಲಕ್ಕೋಟೆಯನ್ನು ತೆಗೆದು ಆ ಕಾಗದವನ್ನು ಮತ್ತು ಎರಡು ೧೦ ರೂ. ಗಳ ನೋಟುಗಳನ್ನೂ ಅದರೊಳಗಿಟ್ಟು ಅಂಟಿಸಿ, ಉಳಿದ ನೋಟುಗಳನ್ನು ತನ್ನ ಕಿಸೆಯೊಳಗಿಟ್ಟುಕೊಂಡ. ಶಶಿಯು ಇನ್ನೂ 'ಬಾತ್‌ರೂಮಿ'ನಿಂದ ಹೊರಕ್ಕೆ ಬಂದಿರಲಿಲ್ಲ. ಮತ್ತೊಂದು ಕ್ಷಣ ಯೋಚಿಸಿ ತಾನು ಅಂಟಿಸಿದ್ದ ಲಕ್ಕೋಟೆಯನ್ನು ಶಶಿಯು ಕುಳಿತಿದ್ದ ಬರ್ತಿನ ಕೆಳಗೆ ಹಾಕಿದ. ಒಂದುವೇಳೆ ಅವಳೇನಾದರೂ ತನ್ನ ದೊಡ್ಡ ಪೆಟ್ಟಿಗೆಯನ್ನು ತೆಗೆಯಲಿಚ್ಛಿಸಿದರೆ ಆಗ ಅದು ಅವಳ ಕಣ್ಣಿಗೆ ಬೀಳುವುದೆಂದೂ, ತೆಗೆದುಕೊಂಡು ನೋಡಿಕೊಳ್ಳುವಳೆಂದೂ ಭಾವಿಸಿ,

ತನ್ನ ಕಡೆಯ ಕಿಟಕಿಯಿಂದಾಚೆ ತಲೆಹಾಕಿ ದೇವರತ್ನನ ಕಡೆಗೆ ಗಮನಕೊಟ್ಟ. ೫-೩೫ ಆಗಲು ಮೊದಲನೆಯ ಘಂಟೆಯ ಶಬ್ದ ಕೇಳಿಬಂತು. ಅಲ್ಲಿ ಇಲ್ಲಿ ಎಲ್ಲಕಡೆಯೂ ಅರಸಿ ಕೊನೆಗೆ ಪ್ಲಾಟ್ ಫಾರಮ್ಮಿನ ಒಂದು ಮೂಲೆಯಲ್ಲಿ ದೇವರತ್ನನು ಷರಾಯಿ ಜೇಬುಗಳಲ್ಲಿ ಕೈಯಿಟ್ಟುಕೊಂಡು ನಿಂತಿದ್ದುದನ್ನು ಕಂಡ. ಮತ್ತೆ ರೈಲು ಕದಲುವವರೆಗೂ ಗಿರೀಶನು ಅವನ ಮೇಲಿಂದ ತನ್ನ ದೃಷ್ಟಿಯನ್ನು ಹೊರಳಿಸಲಿಲ್ಲ. ಘಂಟೆ ೫-೪೦ ಆಯಿತು. ರೈಲು ಕದಲಿತು. ದೇವರತ್ನನು ಗಿರೀಶನಿಗೆ ಭರವಸೆಕೊಟ್ಟಿದ್ದಂತೆ ಬೇರೆ ಕಂಪಾರ್ಟ್‌ಮೆಂಟಿಗೆ ಹತ್ತಿ ಕೂಡುವ ಪ್ರಯತ್ನವನ್ನೇ ಮಾಡಲಿಲ್ಲ. ರೈಲು ಗುಂತಕಲ್ ಸ್ಟೇಷನ್ನನ್ನು ದಾಟಿತು. ಗಿರೀಶನು 'ನಾನಂದು ಕೊಂಡಂತೆಯೇ ಮಾಡಿದ' ಎಂದುಕೊಂಡು ಕಿಟಕಿಯಿಂದ ತಲೆಯ ನ್ನೊಳಕ್ಕೆ ತೆಗೆದುಕೊಂಡು, ಒಂದು ಸಿಗರೇಟು ಹಚ್ಚಿ 'ಬಾತ್ ರೂಮಿ'ನ ಕಡೆ ನೋಡಿದ. ಶಶಿಯು ತನಗಾಗಿ ಕಾದಿದ್ದ ದೌರ್ಭಾಗ್ಯದ ಅರಿವೇ ಇಲ್ಲದೆ 'ಬಾತಾರೂಮಿ'ನಲ್ಲಿ ತನ್ನ ಶೃಂಗಾರದಲ್ಲಿ ಮುಗ್ನಳಾಗಿ ದ್ದಳು. ಗಿರೀಶನು ಯೋಚನಾಮಗ್ನನಾಗಿ ಕುಳಿತನು.

ರೈಲು ಗುಂತಕಲ್ ಸ್ಟೇಷನ್ನನ್ನು ಬಿಟ್ಟು ಮೂರು ನಾಲ್ಕು ಮೈಲಿಗಳಷ್ಟು ದೂರ ಹೋಗಿತ್ತು. ಆ ವೇಳೆಗೆ ಶಶಿಯು 'ಬಾತ್ ರೂಮಿ'ನಿಂದ ತನ್ನ ಮುಖಾಲಂಕಾರವನ್ನು ಮುಗಿಸಿಕೊಂಡು ಹೊರಕ್ಕೆ ಬಂದಳು. ಕಂಪಾರ್ಟ್‌ಮೆಂಟಿನಲ್ಲಿ ಗಿರೀಶನೊಬ್ಬನೇ ಇದ್ದುದನ್ನು ಕಂಡು 'ಇವರೆಲ್ಲಿ? ಎಂದು ಕೇಳಿದಳು.

"ಪ್ಲಾಟ್‌ಫಾರಮ್ಮಿ'ನ ಮೇಲೆ ಓಡಾಡುತ್ತಿದ್ದರು. ಅವರು ಆ ಕೊನೆಯಲ್ಲಿದ್ದಾಗಲೇ ರೈಲು ಕದಲಿತು ಬಹುಶಃ ಅಲ್ಲೇ ಹತ್ತಿರದ 'ಕಂಪಾರ್ಟ್‌ಮೆಂಟಿ'ಗೆ ಹತ್ತಿಕೊಂಡಿರಬೇಕು. ಮುಂದಿನ ಸ್ಟೇಷನ್ನಿನಲ್ಲಿ ಬರಬಹುದು" ಎಂದು ಗಿರೀಶನು ಉತ್ತರಕೊಟ್ಟ. ಶಶಿಯು ನಿಶ್ಚಿಂತಳಾಗಿ ತನ್ನ ಸೋಪು, ಟವಲು, ಕುಂಕುಮದ ಭರಣಿ,

ಬಾಚಣಿಗೆ ಇವೆಲ್ಲವನ್ನೂ ಕೈಪೆಟ್ಟಿಗೆಗೆ ಮತ್ತೆ ಹಿಂದಿರುಗಿಸಿ, ಸ್ವಸ್ಥ ಚಿತ್ತಳಾಗಿ ಕುಳಿತು ಮತ್ತೆ ಕಿಟಕಿಯಿಂದ ಹೊರಗೆ ತನ್ನ ದೃಷ್ಟಿಯನ್ನು ನೆಟ್ಟಳು. ಗಿರೀಶನು ನಿರೀಕ್ಷಿಸಿದಂತೆ ಶಶಿಯು 'ಬರ್ತ್'ನ ಕೆಳಗಿದ್ದ ದೊಡ್ಡ ಪೆಟ್ಟಿಗೆಯನ್ನು ತೆಗೆಯಲು ಹೋಗಲೇ ಇಲ್ಲ. ಇನ್ನದರ ಬದಿಗೆ ಬಿದ್ದಿದ್ದ ಕಾಗದದಕಡೆಗೆ ಅವಳ ಗಮನವನ್ನು ಸೆಳೆಯುವುದು ಹೇಗೆಂದು ಯೋಚಿಸಲಾರಂಭಿಸಿದನು. ಸರಿಯಾದ ಯಾವ ಉಪಾಯವೂ ಹೊಳೆಯಲಿಲ್ಲ. "ಸರಿ! ನಾನೇಕಿಷ್ಟು ಪೇಚಾಡಬೇಕು. ಅವಳ ಹಣೇಬರಹ ನನ್ನ ಕೆಲಸ ನಾನು ಮಾಡಿ, ಕೈತೊಳೆದು ಕೊಂಡುಬಿಡ್ತೀನಿ. ಆ ಮೇಲೆ ಎಲ್ಲಾದರೂ ಹಾಳಾಗಿ ಹೋಗಲಿ. ನನಗೇನಾಗಬೇಕಾಗಿದೆ" ಎಂದುಕೊಂಡು,

"ಅದೇನೋ ಕಾಗದ ಕೆಳಗೆ ಬಿದ್ದಿದೆ ನೋಡಿ; ನಿಮ್ಮದೇ ಇರಬಹುದು. ಎಲ್ಲೋ ಗಾಳಿಗೆ ಕೆಳಗೆ ಬಿದ್ದಿರಬೇಕೂಂತ ಕಾಣುತ್ತೆ" ಎಂದೊದರಿಬಿಟ್ಟ. ಶಶಿಯು 'ಎಲ್ಲಿ?' ಎಂದು ಕೊಂಡು ಬಗ್ಗಿ 'ಬರ್ತ್'ನ ಕೆಳಗೆ ನೋಡಿದಳು. ಪೆಟ್ಟಿಗೆಯ ಬದಿಗೆ ಬಿದ್ದಿದ್ದ ಲಕ್ಕೋಟೆಯನ್ನು ನಿರಾಸಕ್ತಳಾಗಿ ಕೈಗೆತ್ತಿ ಕೊಂಡು ನೋಡಿದಳು. ಅದರೊಳಗೆ ಏನೋ ಕಾಗದವಿದ್ದಂತಿ ದ್ದರೂ ಲಕ್ಕೋಟೆಯಮೇಲೆ ವಿಳಾಸವಾವುದೂ ಇರಲಿಲ್ಲವಾದ್ದ ರಿಂದ, ಗಿರೀಶನಕಡೆ ನೋಡಿ, 'ಇದು ಯಾರದ್ದೋ ಏನೋ ಒಂದೂ ಗೊತ್ತಾಗುವುದಿಲ್ಲ. ನಿಮ್ಮದೇ ಏನಾದರೂ ಇದ್ದೀತು ನೋಡಿ' ಎಂದು ಕೈಚಾಚಿ ಗಿರೀಶನಿಗೆ ಕೊಡಲು ಹೋದಳು.

"ನನ್ನದಂತೂ ಅಲ್ಲಾನ್ನೋದು ಖಂಡಿತ. ನನ್ನ ಕಾಗದಗಳನ್ನ ಹಾಗೆ ನಾನು ಅಲ್ಲಿ ಇಲ್ಲಿ ಬೀಳಿಸಗೊಡೋದಿಲ್ಲ. ನಿಮ್ಮವರು ಇಲ್ಲಿಂದ ಇಳಿದು ಹೋಗೋಮುಂಚೆ ಅದು ಅವರ ಕೈಲಿತ್ತು. ಬಹುಶಃ ಅವರಿಗೆ ತಿಳೀದೆ ಅದೆಲ್ಲೋ ಅಲ್ಲಿ ಬಿದ್ದುಹೋಗಿರಬೇಕು" ಎಂದು ಗಿರೀಶನು ಉತ್ತರಕೊಟ್ಟ. ಅವನ ಮನಸ್ಸಿನಲ್ಲಿ "ನಾನಂತೂ

ಸುಳ್ಳೇನೂ ಹೇಳಿಲ್ಲ; ಆದಷ್ಟೂ ನಿಜವನ್ನೇ ಹೇಳಿದ್ದೇನೆ. ಆದ್ದರಿಂದ ಈ ವ್ಯವಹಾರದಲ್ಲಿ ಯಾವ ಪಾಪಾನೂ ನನ್ನ ತಲೆಗೆ ಗಂಟು ಬೀಳೋದಿಲ್ಲ." ಎಂಬ ಸಮಾಧಾನವುಂಟಾಯಿತು.

ಲಕ್ಕೋಟೆಯು ದೇವರತ್ನನದೆಂದು ದೃಢಪಟ್ಟಮೇಲೆ, ಅದರಲ್ಲೇನಿದೆಯೆಂಬುದನ್ನೊಡೆದು ನೋಡಲು ತನಗೆ ಹಕ್ಕಿಲ್ಲವೇ ಎಂದು ಶಶಿಯು ಮನಸ್ಸಿನಲ್ಲೇ ಭಾವಿಸಿ ಕುತೂಹಲದಿಂದ ಲಕ್ಕೋಟೆಯನ್ನೊಡೆದಳು. ಗಿರೀಶನು ಇನ್ನು ತಾನತ್ತ ನೋಡುತ್ತಿರುವುದು ಕ್ಷೇಮವಲ್ಲವೆಂದು ಬಗೆದು ಕೈಗೆ ಸಿಕ್ಕಿದ ಪತ್ರಿಕೆಯೊಂದರ ಹಾಳೆಗಳನ್ನು ತಿರುವಿಹಾಕುತ್ತ, ಚಿತ್ರಗಳನ್ನು ನೋಡಲಾರಂಭಿಸಿದ. ಲಕ್ಕೋಟೆಯಲ್ಲಿ ನೋಟುಗಳಿದ್ದುದರ ಅರ್ಥ ಶಶಿಗೆ ಹೊಳೆಯದಿರಲು, ಕಾಗದದ ಮಡಿಕೆ ಬಿಚ್ಚಿ ಅದರ ಒಕ್ಕಣೆಯನ್ನು ಓದಿದಳು. ಓದುತ್ತಿದ್ದ ಹಾಗೆಯೇ ತುಟಿಗಳು ಒಂದು ಕ್ಷಣ ಕಂಪಿಸಿದವು. ಆದರೆ ಮರುಕ್ಷಣವೇ ಅವುಗಳ ಕಂಪನ ನಿಂತಿತು. ಮುಖವು ವಿವರ್ಣವಾಯಿತು ದಂಗು ಬಡಿದವಳಂತೆ ಹಾಗೆಯೇ ತಲೆದಿಂಬುಗಳಿಗೆ ಒರಗಿಕೊಂಡು ಕುಳಿತಳು.

ರೈಲು ಆದೋನಿ ಸ್ಟೇಷನ್ನಿಗೆ ಹೋಗಿ ನಿಂತಾಗ ಶಶಿಯು ಎಚ್ಚೆತ್ತಳು. ಗಾಡಿಯು ಅಲ್ಲಿ ನಿಂತಿದ್ದ ೨೦ ನಿಮಿಷಗಳ ಕಾಲವೂ ಅವಳು ಪ್ಲಾಟ್‌ಫಾರಮ್ಮಿನ ಕಡೆಯಿಂದ ತನ್ನ 'ಕಂಪಾರ್ಟ್‌ಮೆಂಟಿ'ನ ಕಡೆಗೆ ಕೇಳಿ ಬರುತ್ತಿದ್ದ ಪ್ರತಿ ಹೆಜ್ಜೆಯ ಶಬ್ದವನ್ನೂ ಆಲಿಸಿ ಕೇಳುತ್ತಿದ್ದಳು. ಆ ಹೆಜ್ಜೆಯ ಸಪ್ಪಳವು ತೀರ ಸಮೀಪದಲ್ಲಿ ಕೇಳಿ ಬಂದಾಗ ಅತ್ತ ತಿರುಗಿ ನೋಡುವ ಅಪೇಕ್ಷೆಯುಂಟಾದರೂ, ಬಿಗುಮಾನದಿಂದ ಆ ಅಪೇಕ್ಷೆಯನ್ನು ಅಡಗಿಸಿಕೊಳ್ಳುತ್ತಿದ್ದಳು. ಆದರೆ ಸಮೀಪಿಸುತ್ತಿದ್ದ ಹೆಜ್ಜೆಗಳು ಹಾದು ಮುಂದೆ ಹೋದೊಡನೆಯೇ ಅವಳ ಆಶೆಯು ನಿರಾಶೆಯಾಗುತ್ತಿತ್ತು. ಕೊನೆಗೆ ರೈಲೂ ಕದಲಿತು. ದೇವರತ್ನನು ಬರಲಿಲ್ಲ. ಇನ್ನವನು ಹಿಂದಿರುಗುವ ಆಶೆದೂರವಾಯಿತು. ನಡು ನೀರಿನಲ್ಲಿ ಕೈ ಬಿಟ್ಟದ್ದೂ ಅಲ್ಲದೆ, ತಾನು ಅವನ ವಶಕ್ಕೊಪ್ಪಿಸಿದ

ತನ್ನ ಸರ್ವಸ್ವಕ್ಕೆ ೨೦ ರೂ. ಗಳ ಬೆಲೆ ಕಟ್ಟಿ, ಕೊಟ್ಟು ಅಪಮಾನ ಗೊಳಿಸಿಯೂ ಹೋಗಿದ್ದಾನೆಂದು ರೋಷಗೊಂಡು ರೊಚ್ಚಿಗೆದ್ದಳು. ಕೈಯಲ್ಲಿ, ಲಕ್ಕೋಟೆಯಲ್ಲಿದ್ದ ಎರಡು ೧೦ ರೂಪಾಯಿ ನೋಟುಗಳೂ, ಕಾಗದವೂ ಹಾಗೆಯೇ ಇದ್ದವು ಕಣ್ಣಿಗೆ ಬಿತ್ತು. ಅವುಡುಗಚ್ಚಿ ಕೊಂಡು ಅವೆರಡನ್ನೂ ಹರಿದು ಚೂರು ಚೂರು ಮಾಡಿ ಕಿಟಕಿಯಿಂದ ಹೊರಕ್ಕೆಸೆದಳು. ಗಿರೀಶನು ತನ್ನ ಕಡೆಯೇ ನೋಡುತ್ತಿದ್ದಾನೆಂದು ಅವಳ ಮನಸ್ಸಿಗೆ ಹೊಳೆಯಿತೇನೋ ಉಕ್ಕಿ ಬರುತ್ತಿದ್ದ ದುಃಖ ವನ್ನಡಗಿಸಿಟ್ಟುಕೊಂಡು ಕಿಟಕಿಯ ಚೌಕಟ್ಟಿಗೆ ತಲೆಕೊಟ್ಟು ಕಣ್ಣು ಮುಚ್ಚಿದಳು.

ನೋಟುಗಳನ್ನೂ ಹರಿದೊಗೆದುದು ಗಿರೀಶನ ಕಣ್ಣಿಗೆ ಬೀಳದೆ ಹೋಗಲಿಲ್ಲ ‘ನಾನು ಮಾಡಿದ ಕೆಲಸ ಒಳ್ಳೆಯದೇ ಆಯಿತು. ಇಲ್ಲದೇ ಇದ್ದಿದ್ರೆ ೫೦೦ ರೂಪಾಯಿಗಳೂ ಆ ೨೦ ರೂಪಾಯಿ ಹೋದದಾರಿಗೇ ಹೋಗಿಬಿಡುತ್ತಿತ್ತು. ಇರಲಿ; ಅಮ್ಮಾವರಿಗೆ ರೂಪಾಯಿಯ ಬೆಲೆ ಗೊತ್ತಾಗುವ ಕಾಲವೂ ಬರುತ್ತೆ’ ಎಂದು ಗಿರೀಶನು ಮನಸ್ಸಿನಲ್ಲೇ ಅಂದುಕೊಂಡ. ಹೊಟ್ಟೆ ಕೆರೆಯಲಾರಂಭಿ ಸಿತು. ಸಂಜೆ ಅವನೇನೂ ಉಪಾಹಾರ ಸೇವಿಸಿರಲಿಲ್ಲ. ರಾಯಚೂರು ಸ್ಟೇಷನ್ನನ್ನು ತಲಪುತ್ತಲೇ ಟೀ ತರಿಸಿಕೊಳ್ಳುವುದಾಗಿ ನಿರ್ಧರಿಸಿದನು.

ಗಾಡಿಯು ರಾಯಚೂರನ್ನು ಸಂಜೆ ೭-೫೭ ಘಂಟೆಗೆ ಮುಟ್ಟಿತು. ಗಿರೀಶನು ಮೊದಲೇ ನಿರ್ಧರಿಸಿದ್ದಂತೆ ಟೀ ತರಿಸಿಕೊಂಡನು. ಕೊನೆಗೆ ಟೀ ಒಂದೇ ಸಾಲದೆಂದು ಕೆಲವು ಇಡ್ಲಿಗಳನ್ನೂ, ಬಿಸ್ಕತ್ತನ್ನೂ ತರಿಸಿಕೊಂಡನು. ಅವೆಲ್ಲ ಒಂದು ಹಲಗೆಯ ಮೇಲೆ ಹಾಗೇ ಉಳಿದುವು. ತನ್ನೆದುರಿನಲ್ಲಿ ಒಂದು ವ್ಯಕ್ತಿಯು ಕೊರಗುತ್ತ ಕುಳಿತಿ ದ್ದಾಗ ತಾನು ನಿಶ್ಚಿಂತೆಯಿಂದ ತನ್ನ ಹೊಟ್ಟೆಯಪಾಡನ್ನು ನೋಡಿ ಕೊಳ್ಳಲು ಗಿರೀಶನು ಹಿಂಜರಿದನು. ‘ಇದ್ದರೇನಂತೆ ಪ್ರಪಂಚದಲ್ಲಿ ಇಂತಹವರೆಷ್ಟೋ ಮಂದಿ ಇದ್ದಾರೆ; ಅವರ ಯೋಚನೆಯೆಲ್ಲ ನಿನಗೇಕೆ

ಯೇನು ? ನಿನ್ನ ಪಾಡನ್ನು ನೀನು ನೋಡಿಕೋ' ಎಂದವನ ಮನಸ್ಸು ನುಡಿದರೂ ಅವನ ಅಂತರಾತ್ಮವು ಅದನ್ನೊಪ್ಪಲಿಲ್ಲ ; 'ಛಿ! ಅಂತಹ ಮತಿಗೇಡಿಯಾಗಬೇಡ'ವೆಂದು ಅಂದಿತು. ರೈಲು ರಾಯಚೂರನ್ನು ೮ ಘಂಟೆ ೧೭ ನಿಮಿಷಕ್ಕೆ ಬಿಟ್ಟಿತು. ಅಲ್ಲಿಯುವರೆಗೂ ಸುಮ್ಮನಿದ್ದವನು, ಆಗ ಎದ್ದು ಒಂದು ಬಟ್ಟಲಿನಲ್ಲಿ ಟೀ ಬಗ್ಗಿಸಿ, ಅದನ್ನು ಶಶಿಯ ಮುಂದೆ ಹಿಡಿದು, 'ಸ್ವಲ್ಪ ಟೀ ತೆಗೆದುಕೊಳ್ಳಿ' ಎಂದು ಇಂಗ್ಲೀಷಿನಲ್ಲಿ ನುಡಿದ. ಶಶಿಯು ಮನಸ್ಸೆಲ್ಲೋ ಇದ್ದುದರಿಂದ ಅವಳಿಗದು ಕೇಳಿಸಲಿಲ್ಲ. ಗಿರೀಶನು ಮತ್ತೊಮ್ಮೆ ಘಟ್ಟಿಯಾಗಿ 'ದಯವಿಟ್ಟು ಇದನ್ನು ತೆಗೆದುಕೊಳ್ಳುತ್ತೀರಾ ?' ಎಂದ. ಆಗವಳು ಕಣ್ಣುಬಿಟ್ಟು ನೋಡಿ, 'ನೋ ! ಥ್ಯಾಂಕ್ಸ್' ಎಂದು ಮತ್ತೆ ಕಣ್ಣುಮುಚ್ಚಿಕೊಂಡಳು.

ಗಿರೀಶನು, 'ನಿಮ್ಮಿಷ್ಟ ಹಾಗಾದರೆ' ಎಂದುಕೊಂಡು ಬುಟ್ಟಿಯಿಂದ 'ಥರ್ಮಾಸ್ ಫ್ಲಾಸ್ಕ'ನ್ನು ತೆಗೆದು ಇದ್ದ ಬದ್ದ ಟೀಯನ್ನೆಲ್ಲ ಅದಕ್ಕೆ ಹಾಕಿ ಮುಚ್ಚಿಟ್ಟು ಕುಳಿತ. ಅವನಿಗೆ ರೇಗಿಹೋಯಿತು. ಅವನು ಅದುವರೆಗೂ ಯಾವ ಹೆಂಗಸಿಗೂ ಈ ರೀತಿ ಉಪಾಚಾರ ಮಾಡಲು ಹೋಗಿರಲಿಲ್ಲ. ಈಗ ಆರೀತಿ ತನ್ನ ತತ್ವಕ್ಕೆ ವಿರುದ್ಧವಾಗಿ ಹೋಗಿ ಅಪಮಾನಕ್ಕೀಡಾದುದಾಗಿ ಭಾವಿಸಿದನು. ಹೆಂಗಸು-ಗಿಂಗಸೆಂಬ ಗೌರವಕ್ಕೆ ಮನಸೋಲದೆ ಅದೇ ಕೋಪದಲ್ಲಿ ಸಿಗರೇಟನ್ನು ಒಂದಾಗುತ್ತಲೊಂದರಂತೆ ಎರಡು ಮೂರು ಸೇದಿಹಾಕಿಬಿಟ್ಟ. ಅಲ್ಲಿಗೆ ಕೋಪವಿಳಿಯಿತು. ತನ್ನ ಹುಚ್ಚಿಗೆ ತಾನೇ ನಕ್ಕು ಒಂದುಕ್ಷಣ ಹಾಗೆಯೇ ಕುಳಿತ. ತಲೆಗೇನೋ ಹೊಳೆಯಿತು. ಎದ್ದು ಕಂಪಾರ್ಟ್‌ಮೆಂಟಿ'ನ ಬಾಗಿಲುಗಳ ಮೇಲೆ ಹಾಕಲ್ಪಟ್ಟಿದ್ದ ಚಿಲಕಗಳನ್ನು ಮುಂದಕ್ಕೆ ತಳ್ಳಿ, ಬಂದು ಸ್ವಸ್ಥವಾಗಿ ಮಲಗಿಕೊಂಡು ದೀಪವಾರಿಸಿಬಿಟ್ಟು, ಶಾಲನ್ನು ಮುಸುಕುಹಾಕಿಕೊಂಡ. ಹೊಟ್ಟೆಯಲ್ಲಿ ಹಸಿವಿನ ಬೇಗೆ ಹೆಚ್ಚಾಗಿದ್ದುದರಿಂದ ನಿದ್ದೆ ಬರುವಹಾಗಿರಲಿಲ್ಲ. ಕೊನೆಗೆ ಮನಸ್ಸಿಲ್ಲದಿದ್ದರೂ ಮುಖದಮೇಲಿನ ಮುಸುಕನ್ನು ಓರೆ

ಮಾಡಿಕೊಂಡು ಶಶಿಯ ಮೇಲೊಂದು ಕಾವಲಿನ ಕಣ್ಣಿಟ್ಟು ಕಾಲ ಕಳೆಯಲಾರಂಭಿಸಿದನು. ಅವನ ಮನಸ್ಸಿನಲ್ಲಿ 'ಇದೆಲ್ಲಿಯ ಗ್ರಹಚಾರ ಗಂಟುಬಿತ್ತಪ್ಪಾ ನನಗೆ' ಅನ್ನಿಸಿತು.

ರೈಲು ವಾಡಿ, ಷಹಾಬಾದ್ ಸ್ಟೇಷನ್ನುಗಳನ್ನು ದಾಟಿತು. ಸುಮಾರು ೧೧ ಘಂಟೆಯವರೆಗೂ ಶಿಲಾಪ್ರತಿಮೆಯಂತೆ ಕುಳಿತಿದ್ದ ಶಶಿಯು ಸ್ವಲ್ಪ ತನ್ನ ಸ್ಥಾನದಿಂದ ಕದಲಿದಳು. ಅದುವರೆಗೂ ಕಣ್ಣಲ್ಲಿ ಕಣ್ಣಿಟ್ಟು ಕಾಯುತ್ತಿದ್ದ ಗಿರೀಶನಿಗೆ ಆಗತಾನೇ ನಿದ್ದೆಯ ಝೋಂಪು ಹತ್ತಿತ್ತು. ಕಣ್ಣಿಗೆ ವಿಪರೀತ ಶ್ರಮವಾಗಿದ್ದುದರಿಂದ ರೆಪ್ಪೆಗಳು ಏಕಾಏಕಿ ತಮ್ಮ ಕರ್ತವ್ಯಪಾಲನೆಮಾಡಲು ನಿರಾಕರಿಸುತ್ತಿದ್ದವು. ಅವನ ಮನಸ್ಸು ಪೂರ್ಣವಾಗಿ ಅವನನ್ನು ಬಡಿದೆಬ್ಬಿಸಿತು. ಕಣ್ಣು ರೆಪ್ಪೆಗಳು ಮುಚ್ಚಿಕೊಂಡಿದ್ದರೂ 'ಕಂಪಾರ್ಟ್‌ಮೆಂಟ'ನೊಳಗೆ ಬೆಳಕಿದೆಯೆಂಬ ಅನುಭವವು ಅವನಿಗಾಯಿತು. ಬಲಾತ್ಕಾರವಾಗಿ ಕಣ್ಣು ರೆಪ್ಪೆಯನ್ನು ತೆರೆದು ನೋಡಿದ. ಅವನ ಭಾವನೆಯು ತಪ್ಪಾಗಿರಲಿಲ್ಲ. ದೀಪ ಹಚ್ಚಲ್ಪಟ್ಟಿತ್ತು. ಮುಸುಕನ್ನು ಸ್ವಲ್ಪಮಟ್ಟಿಗೆ ಓರೆಮಾಡಿಕೊಂಡು ನೋಡಿದನು. ಎದುರಿಗೆ ಶಶಿಯು ಕುಳಿತಿದ್ದ ಜಾಗ ಖಾಲಿಯಾಗಿತ್ತು. ಅವನ ಎದೆ ಧಸಕ್ಕೆಂದಿತು. 'ಏನೋ ಅನಿಷ್ಟದ ಸೂಚನೆಯೇ ಅದೆ'ಂದು ಅವನು ಭಾವಿಸಿದ. ಅವನ ತಲೆಯ ಕಡೆ ಸ್ವಲ್ಪ ಸದ್ದಾಯಿತು. ಅದನ್ನು ಕೇಳಿದ ಕೂಡಲೇ 'ಸದ್ಯ, ಇನ್ನೂ ಏನೂ ಆಗಿಲ್ಲ'ವೆಂದುಕೊಂಡು ಒಂದು ಸಮಾಧಾನಕರವಾದ ನಿಟ್ಟುಸಿರು ಬಿಟ್ಟ.

ಶಶಿಯು ತನ್ನ ಜಾಗದಿಂದ ಕದಲುವ ಮುಂಚೆ ಒಂದು ನಿರ್ಧಾರಕ್ಕೆ ಬಂದಿದ್ದಳು. ನಿರ್ಧಾರವಾದೊಡನೆಯೇ ಅದನ್ನು ಆಚರಣೆಯಲ್ಲಿ ತರುವ ಉದ್ದೇಶದಿಂದ ಎದ್ದಳು. ರೈಲು ಅತಿವೇಗದಿಂದ ಮುಂದೆ ಸಾಗುತ್ತಿತ್ತು. 'ಕಂಪಾರ್ಟ್‌ಮೆಂಟಿನ' ಬಾಗಿಲನ್ನು ತೆಗೆಯಲು ಪ್ರಯತ್ನಿಸಿದಳು. ಸಾಧ್ಯವಾಗಲಿಲ್ಲ. ಕಾರಣವನ್ನು ಕಂಡು

ಹಿಡಿದು ಆ ತೊಂದರೆಯನ್ನು ನಿವಾರಿಸಿಕೊಳ್ಳಲು ದೀಪ ಹಚ್ಚಿದಳು. ಬಾಗಿಲಮೇಲುಗಡೆ ಅವಳ ಕೈಗೆ ಸಿಲುಕದಷ್ಟು ಎತ್ತರದಲ್ಲಿ ಒಂದು ಚಿಲಕವು ಹಾಕಲ್ಪಟ್ಟಿತ್ತು. ಅದನ್ನು ತೆಗೆಯಬೇಕೆಂದು ಯೋಚಿಸಿದಳು. ಆ ಚಿಲಕವನ್ನು ತೆಗೆಯಲು ಗಿರೀಶನು ಮಲಗಿದ್ದ ಬರ್ತಿನ ಮೇಲೆ ಹತ್ತಿ, ಪ್ರಯತ್ನಿಸಬೇಕಾಗಿದ್ದಿತು. ಆ ಪ್ರಯತ್ನದಲ್ಲಿ ಗಿರೀಶನಿಗೆಲ್ಲಿ ಎಚ್ಚರಿಕೆಯಾಗುವುದೋ ಎಂಬ ಭೀತಿ ಬೇರೆ ಇತ್ತು. ಅದರ ಮೇಲೆ ಸದ್ದಿಲ್ಲದೆ ಪ್ರಯತ್ನಿಸಲು ನಿರ್ಧರಿಸಿದಳು. ಆದರೆ ಆ ಪ್ರಯತ್ನದಲ್ಲಿದ್ದಾಗ ಗಿರೀಶನ ನಿಟ್ಟುಸಿರು ಕೇಳಿ ತಟಕ್ಕನೆ ದೀಪ ಆರಿಸಿಬಿಟ್ಟಳು. ಒಂದು ಕ್ಷಣ ಕಳೆಯಲು, ಚಿಲಕ ತೆಗೆಯುವ ಹವ್ಯಾಸವನ್ನು ಬಿಟ್ಟು ಬೇರೆ ಪ್ರಯತ್ನಕ್ಕೆ ತೊಡಗಿದಳು.

ಗಿರೀಶನು ಬಹಳಹೊತ್ತು ಕಾಯಲಾರದೆ ಮೆಲ್ಲನೆ ಮುಸುಕನ್ನು ತೆಗೆದು ತಲೆಯನ್ನು ಹೊರಳಿಸಿ, ತಲೆಯಕಡೆಯಿದ್ದ ಬಾಗಿಲಿನಕಡೆ ನೋಡಿದನು. ನೋಡಿದ್ದೇ ತಡ ಹೊದ್ದಿದ್ದ ಶಾಲನ್ನು ಕಾಲಿಂದೊದ್ದು ಕೊಂಡೆದ್ದು ಒಂದೇ ಹಾರಿಗೆ ಹಾರಿ ಶಶಿಯ ಜಡೆ ಹಿಡಿದು ಒಂದು ಕೈಗೆ ಸುತ್ತಿಕೊಂಡು ಕಿಟಕಿಯಿಂದಾಚೆ ಮುಕ್ಕಾಲುಭಾಗ ಹೊರಬಿದ್ದಿದ್ದ ಅವಳ ದೇಹವನ್ನು ಮತ್ತೊಂದು ಕೈಯಿಂದ ದರದರನೆ ಎಳೆದು ಕೊಂಡೆತ್ತಿ ತಂದು, ಅವಳ ಹಾಸಿಗೆಯ ಮೇಲೆ ಅವಳನ್ನು ಉರುಳಿಸಿ ದೀಪಹಚ್ಚಿ,

"ಏನು ಈ ಹುಚ್ಚಾಟದ ಅರ್ಥ ?" ಎಂದು ವ್ಯಗ್ರನಾಗಿ ಕೇಳಿದನು.

ನನ್ನಿಷ್ಟ ಬಂದಹಾಗೆ ನಾನು ಮಾಡಿಕೊಳ್ತೇನೆ. ಮಧ್ಯೆ ತಲೆಹಾಕಿಕೊಂಡು ಬರೋಕೆ ನೀವ್ಯಾರು ?" ಎಂದು ಶಶಿಯು ಕೆರಳಿ ಎದ್ದು ಕುಳಿತಳು.

"ನಾನ್ಯಾರಾದರೂ ಆಗಲಿ; ನಿನ್ನಿಷ್ಟಬಂದಹಾಗೆ ನೀನು ಧಾರಾಳವಾಗಿ ಮಾಡಿಕೊಳ್ಳಬಹುದು. ಆದರೆ ನಾನೇನು ನಿನಗೆ

ದ್ರೋಹಮಾಡಿದ್ದು ? ನಮ್ಮ ದೇಶದಲ್ಲಿ ೩೫೦ ಕೋಟಿ ಜನರಿದ್ದಾರೆ. ಅವರನ್ನೆಲ್ಲಾ ಬಿಟ್ಟು ನನ್ನನ್ನೇ ಹುಡುಕಬೇಕೆ ನೀನು, ನಿನ್ನ ಬುದ್ಧಿಗೇಡಿತನಕ್ಕೆ ದಂಡ ತೆರೋಕೆ. ಹಾಗೆ ಸಾಯಬೇಕೂಂತನ್ನೋ ಇಷ್ಟವಿದ್ದರೆ ಬೇರೆ ಇನ್ಯಾವ 'ಕಂಪಾರ್ಟ್‍ಮೆಂಟಿ'ಗಾದರೂ ಹೋಗಿ ನಾಲ್ಕು ಸ್ಟೇಷರ್ಷ ಕಳಿಯೋವರೆಗೆ ಕೂತಿದ್ದು ಆಮೇಲೆ ಹೊರಕ್ಕೆ ಹಾರಿಕೊಂಡು ಸತ್ತಿದ್ದರೆ ಯಾರು ಬೇಡಾಂತಿದ್ದರು ? ಎಲ್ಲಾ ಬಿಟ್ಟು ನನ್ನ 'ಕಂಪಾರ್ಟ್‍ಮೆಂಟೇ' ಆಗಬೇಕಾಗಿತ್ತೇನು ನಿನ್ನ ಈ ಅವಸಾನ ನಾಟಕದ ಕೊನೇ ಅಂಕಕ್ಕೆ ?" ಎಂದು ಗರ್ಜಿಸಿದ. ಶಶಿಗೆ ಕೋಪ ವಿನ್ನೂ ಹೆಚ್ಚಿತು.

"ನಿಮ್ಮನ್ಯಾರು ಬಾ ಅಂದ್ರು ಈ ಕಂಪಾರ್ಟ್‍ಮೆಂ'ಟಿಗೆ ? ಗಾಡಿಯಿಂದ ಹೊರಕ್ಕೆ ಹಾರಿಕೊಳ್ಳಬೇಕೂಂತ ಮನಸ್ಸು ಬಂದರೆ ಹಾರಿಕೊಳ್ತೇನೆ. ನಿವ್ಯಾರು ತಡೆಯೋಕೆ ?" ಎಂದು ಎದ್ದು ಮತ್ತೊಮ್ಮೆ ಬಾಗಿಲಕಡೆ ಹೊರಟಳು. ಅವಳ ಮುಖದಲ್ಲಿ ಆಗ ನಿಜವಾಗಿಯೂ ಚಂಡಿಯ ರೌದ್ರಾವೇಶವು ಎದ್ದು ಕಾಣುತ್ತಿತ್ತು. ಗಿರೀಶನು ಎಂದೂ ಹೆಂಗುಸರ ಮೈಮೇಲೆ ಕೈಹಾಕಿದವನಲ್ಲ. ಇಂದು ಅವನ ಹಣೇಬರಹಕ್ಕೆ ಎರಡನೆಯಬಾರಿ ಅವನು ಹಾಗೆ ಮಾಡಬೇಕಾಗಿ ಬಂದಿತು. ಅವನ ಸ್ಥೈರ್ಯವೆಲ್ಲಾ ಗಾಳಿಗೆ ತೂರಿ ಹೋಗಿತ್ತು. ಈ ಹೆಣ್ಣು ನಿಜವಾಗಿಯೂ ತಾನು ಹೇಳಿದಂತೆ ಮಾಡಿಯೇಬಿಡುವ ಜಾತಿಯವಳೆಂದು ಅವನ ಮನಸ್ಸಿಗೆ ಖಂಡಿತವಾದ ಮೇಲಂತೂ ಅವನ ಎದೆ ಡವಡವನೆ ಹೊಡೆದುಕೊಳ್ಳಲಾರಂಭಿಸಿತು. ನಡುಗಿ, ಶಶಿಯನ್ನು ಮತ್ತೊಮ್ಮೆ ಒರಟಾಗಿ ಹಿಡಿದೆಳೆದು ಅವಳ ಹಾಸಿಗೆಯಮೇಲೆ ದೂಡಿದನು. ಅವಳಿಗದರಿಂದ ನೋವೂ, ಅವನ ಬಗ್ಗೆ ಕ್ರೋಧಾಸಹ್ಯಗಳೂ ಇಮ್ಮಡಿಯಾಗಿ ಉಂಟಾಯಿತು. ಅವನ ಮೇಲೆ ಬೈಗಳ ಮಳೆ ಕರೆದು,

"ಯು ಆರ್ ಎ ಬ್ರೂಟ್" ಎಂದಳು. ಗಿರೀಶನು, 'ಥ್ಯಾಂಕ್ಸ್ ಫಾರ್ ದಿ ಕಾಂಪ್ಲಿಮೆಂಟ್' ಎಂದ.

"ನಿಮಗೆ 'ಮ್ಯಾನರ್ಸ್' ಕೂಡಾ ಇಲ್ಲ"

"ಮ್ಯಾನರ್ಸ್' ಇಲ್ಲದಿದ್ರೂ ಬುದ್ಧಿ-ವಿವೇಕಗಳಾದರೂ ಇವೆ. ನಿನ್ನ ಹಾಗೆ ಮತಿಗೆಟ್ಟಿಲ್ಲ"ವೆಂದುತ್ತರ ಕೊಟ್ಟ. ಶಶಿಗೆ ಕೋಪವು ಉಕ್ಕೇರಿ ದಿಕ್ಕು ತೋಚದಂತಾಗಿ, ಕೊನೆಗೆ ಕಣ್ಣಿನಲ್ಲಿ ನೀರುಕ್ಕಿತು. ಅದುವರೆಗೂ ಅಡಗಿಸಿಟ್ಟುಕೊಂಡಿದ್ದ ಅವಳ ಹೃದಯ ವೇದನೆಯು ಅಳುವಿನ ರೂಪದಲ್ಲಿ ಪಾರಾಗಿಹೋಗಲು ಅವಕಾಶವಾಯಿತು. ಹಾಸಿಗೆಯ ದಿಂಬಿನಲ್ಲಿ ಮುಖವನ್ನು ಮುಚ್ಚಿಟ್ಟುಕೊಂಡು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಅದನ್ನು ಕಂಡು ಗಿರೀಶನಿಗೂ ಧೈರ್ಯವುಂಟಾ ಯಿತು. ಒಂದು ನಿಟ್ಟುಸಿರು ಬಿಟ್ಟು, 'ದೇರ್ ಯು ಆರ್! ದಟೀಸ್ ಬೆಟರ್,' ಮನಃಪೂರ್ತಿಯಾಗಿ ಅತ್ತುಬಿಡು. ಅಲ್ಲಿಗೆ ಹೊರೆ ಸ್ವಲ್ಪ ಕಡಿಮೆಯಾಗತ್ತೆ" ಎಂದು ಹೋಗಿ ತನ್ನ ಜಾಗದಲ್ಲಿ ಕುಳಿತನು.

ಗಿರೀಶನು ನಾಲ್ಕುಮಂದಿ ಪುಂಡರನ್ನು ಎದುರಿಸಬಲ್ಲಂತಹ ಕೆಚ್ಚೆದೆಯವನು. ವಾಗ್ಯುದ್ಧಕ್ಕೆ ನಿಂತರೂ ಸೋಲದಂತಹ ಚುರುಕು ಬುದ್ಧಿಯವನದು; ಹೆಂಗುಸರ ನಾಲಿಗೆಗೆ ಹೆದರುವಂತಹ ಭೀರುವಲ್ಲ; ಮಾತಿಗೆ ಮಾತನ್ನು ಮನಸ್ಸಿಗೆ ಚುಚ್ಚುವಂತೆ ಆಡುವ ಸ್ವಭಾವದವನು. ಕಷ್ಟ ಪರಿಸ್ಥಿತಿಯಲ್ಲಿ ಸಿಕ್ಕಿ ಅವನ ಕಣ್ಣೆದುರಿಗೇ ಯಾರಾದರೂ ನರಳು ತ್ತಿರುವುದನ್ನು ಕಂಡು ಅವನ ಹೃದಯವು 'ಅಯ್ಯೋ ಪಾಪ!' ವೆಂದರೂ, ಅವನ ಮನಸ್ಸು 'ನನಗೇಕೆ ಇದರ ಗೊಡವೆ; ಅವರವರ ಪಾಡು ಅವರಿಗೆ ಎನ್ನುವಂತಹುದು. ಸಾಧಾರಣವಾಗಿ ಅವನ ಹೃದಯ-ಮನಸ್ಸುಗಳಿಗೆ ದ್ವಂದ್ವ ಯುದ್ಧವಾದರೆ ಅವನ ಮನಸ್ಸೇ ಕೊನೆಗೆ ಜಯಭೇರಿ ಹೊಡೆದುಕೊಂಡು ಮೇಲೆದ್ದು ಬರುತ್ತಿತ್ತು. ಇಂತಹ ಶಕ್ತಿಯುತ ಪುರುಷನು ಒಬ್ಬ ಹೆಂಗುಸಿನ ಅಳುವನ್ನು ಎದುರಿಸಲಾಗ ದವನಾಗಿದ್ದನು. ಇದುವರೆಗೆ ಅವನ ಮೇಲೆ ಅಳುವಿನ ಅಸ್ತ್ರ-ಬ್ರಹ್ಮಾಸ್ತ್ರವನ್ನು ಯಾರೂ ಪ್ರಯೋಗಿಸಿರಲಿಲ್ಲವಾದ್ದರಿಂದ ಅವನೀಗ ನಿರುಪಾಯನಾಗಿ ಅಸಹಾಯಕನಾಗಿ ಕುಳಿತನು. ಶಶಿಗೆ ಆಗ ಏನು

ಹೇಳಿ, ಅವಳನ್ನು ಸಮಾಧಾನಗೊಳಿಸಬೇಕೆಂಬುದು ಅವನ ಚುರುಕು ಬುದ್ಧಿಗೆ ಹೊಳೆಯದಾಯಿತು. ಅವನು ಮೊದಲು ಬೊಂಬಾಯಿಗೆ ಬಂದಾಗ ಕೇವಲ ನಿರ್ಗತಿಕನಾಗಿ ಬಂದಿದ್ದನು; ತನ್ನ ಬುದ್ಧಿ ಸಾಮರ್ಥ್ಯದಿಂದ ಚಾತುರ್ಯದಿಂದ ಇಂದು ಹಲವಾರು ಸಹಸ್ರ ರೂಪಾಯಿಗಳನ್ನು ಸುಲಲಿತವಾಗಿ ಕೈಯಲ್ಲಿ ಓಡಾಡಿಸಬಲ್ಲಂತಹವ ನಾಗಿದ್ದ. ಅವನು ತಮ್ಮ ಗೆಳೆಯನೆಂದು ಹೇಳಿಕೊಳ್ಳುವಂತಹವರು ಹಲವರಿದ್ದರು. ಅವನ ಹೃದಯವನ್ನು ಹರಿದು ಪಂಜು ಹಿಡಿದು ಹುಡುಕಿದರೂ ಅವನಿಗೆ ಯಾರೊಡನೆಯೂ ಗೆಳೆತನದ ಭಾವವಿದ್ದಂತೆ ಕಾಣುತ್ತಿರಲಿಲ್ಲ. ಹಾಗೆ ಇರುವುದೇ ಮೇಲೆಂದು ಅವನ ಮನಸ್ಸು ನುಡಿಯುತ್ತಿತ್ತು. ಇಷ್ಟೆಲ್ಲ ತತ್ವಗಳನ್ನಿಟ್ಟುಕೊಂಡು ವ್ಯಾಪಾರವಹಿ ವಾಟುಗಳಲ್ಲಿ ಮೇಲುಗೈ ಪಡೆದಿದ್ದ ಗಿರೀಶನ ಚಾಣಾಕ್ಷಮತಿಯು ಈ ಕ್ಷಣದಲ್ಲಿ ಮಂಕಾಯಿತು. ಐದು ನಿಮಿಷ ಕಳೆಯಿತು; ೧೦ ನಿಮಿಷ, ೧೫ ನಿಮಿಷ ಕಳೆಯಿತು; ಶಶಿಯ ಅಳುವು ಮುಗಿಯಲಿಲ್ಲ. ಕೊನೆಗೆ ಅವನಿಗೇನು ಮಾಡಲೂ ಹೊಳೆಯದೆ, 'ಫ್ಲಾಸ್ಕಿ'ನಿಂದ ಎರಡು ಗಾಜಿನ ಲೋಟಗಳಿಗೆ ಟೀ ಬಗ್ಗಿಸಿದ. ಒಂದು ಲೋಟವನ್ನು ಕೈಯಲ್ಲಿ ಹಿಡಿದು ಶಶಿಯ ತಲೆಯಬಳಿ ನಿಂತು,

"ಸ್ವಲ್ಪ ಟೀ ತೆಗೆದುಕೊಳ್ಳಿ; ಸಮಾಧಾನವಾದೀತು" ಎಂದ. ಸಾಧಾರಣವಾಗಿ ಸ್ತ್ರೀಯರಿಗೆ ಹೆಚ್ಚು ಗೌರವಕೊಡುವ ಜಾತಿಗೇ ಗಿರೀಶನು ಸೇರಿದವನು. ಸ್ತ್ರೀಯರು ಔಚಿತ್ಯಮೀರಿ ನಡೆದುಕೊಂಡಾಗ, ಅವರು ಯಾರೇ ಆಗಲಿ ಅವರ ಮೇಲೆ ರೇಗಿ, ಏಕವಚನದಲ್ಲೇ ಮಾತನಾಡಿಬಿಡುತ್ತಿದ್ದ. ಅವನ ಕೋಪವು ಸಹನೆ ತಪ್ಪಿದೆಯೆನ್ನು ವುದಕ್ಕೆ ಅದೊಂದೇ ಸಾಕ್ಷಿ. ಮರುಕ್ಷಣವೇ ತನ್ನ ಆಚಾರಕ್ಕೆ ವಿರುದ್ಧ ವಾಗಿ ತಾನು ವರ್ತಿಸುತ್ತಿರುವುದನ್ನು ಮನಗಂಡು, ನಾಚಿ ಮತ್ತೆ ಶಾಂತಭಾವ ತಾಳಿ ತನ್ನ ತಪ್ಪನ್ನು ತಿದ್ದಿಕೊಳ್ಳುತಿದ್ದ. ಅವನು ಹೇಳಿದ್ದಕ್ಕೆ ಶಶಿಯು ಕಿವಿಗೊಡಲಿಲ್ಲ; ಮತ್ತೊಮ್ಮೆ ಒತ್ತಿ ಹೇಳಿದನು.

ಶಶಿಯು ತಲೆ ಎತ್ತದೆಯೇ "ಸುಮ್ಮನೆ ನನಗೇಕೆ ಹಿಂಸೆ ಕೊಡುತ್ತೀರಿ; ನನಗೆ ಬದುಕೋ ಆಸೆಯಿಲ್ಲ. ನನ್ನ ಬಿಟ್ಟುಬಿಡಿ" ಎಂದಳು. ಗಿರೀಶನಿಗೆ ಮತ್ತೆ ರೇಗಿಹೋಯಿತು. ಟೀ ಲೋಟವನ್ನೊಂದು ಕಡೆ ಇಟ್ಟು,

"ಮಹಾತಾಯಿ! ನೀನು ಸತ್ತರೆ ನನಗೇನಾಗಬೇಕು. ನಾನೇನೂ ನಿನಗೆ ಹಿಂಸೆ ಕೊಡುತ್ತಿಲ್ಲವಲ್ಲ. ನನ್ನ ನಾನು ಉಳಿಸಿಕೊಳ್ಳೋಕೆ ಪ್ರಯತ್ನಮಾಡ್ತಾ ಇದ್ದೇನೆ. ನೀನೇನಾದರೂ ಈ ಗಾಡಿಯಿಂದ ಹಾರಿಕೊಂಡು ಪ್ರಾಣಬಿಟ್ಟರೆ ನಾಳೆ ಬೊಂಬಾಯಿ ಸ್ಟೇಷನ್ನಿನಲ್ಲಿ ನಾನು ರೈಲಿನಿಂದ ಇಳಿಯೋಹೊತ್ತಿಗೆ ಸರಿಯಾಗಿ ನನಗೆ ಕೈಕೋಳಗಳು ಕಾದಿರುತ್ವೆ. ನಿನಗ್ಹೇಗೆ ಗೊತ್ತಾದೀತು ನನ್ನ ಗತಿ ಏನಾಗುತ್ತೇಂತ?" ಎಂದ.

ಶಶಿಯು ಮೆಲ್ಲನೆ ತಲೆಯೆತ್ತಿ ಅವನಕಡೆ ನೋಡಿ, "ನನ್ನ ಗತಿ ಏನೂನ್ನೋದು ನಿಮಗ್ಹೇಗೆ ಗೊತ್ತಾಗ್ಬೇಕು. ನಾನು ಸಾಯಲೇಬೇಕು; ಸತ್ತೇ ಸಾಯ್ತೇನೆ" ಎಂದು ಹಲ್ಲು ಕಚ್ಚಿದಳು.

"ನೀನು ಸಾಯೋದೊಂದೇ ಅಲ್ಲ, ಹುಟ್ಟಿದಾಗಿನಿಂದ ಕನಸ್ನಲ್ಲೂ ನಿನ್ನ ಮುಖ ಕಾಣದೇ ಇದ್ದ ನನ್ನ ಕುತ್ತಿಗೇಗೆ ಒಂದು ಉರುಲೂ ಸಿದ್ಧವಾಗಿಟ್ಟು ಸಾಯೋ ನಿರ್ಧಾರಾನೂ ಮಾಡಿಬಿಟ್ಟಿದ್ದೀಯಲ್ಲಾ.... ಅದೇ ಆಶ್ಚರ್ಯ."

"ನಾನು ಸತ್ತರೆ ನಿಮ್ಮ ಕುತ್ತಿಗೇಗೆ ಯಾಕೆ ಉರುಲು ಬೀಳ ಬೇಕು? ನಿಮಗೂ ನನಗೂ ಏನು ಸಂಬಂಧ?"

"ಅದೇ ನನಗೀಗ ಬಂದಿರೋ ಪ್ರಾಣಸಂಕಟ! ನಿನಗೂ ನನಗೂ ಈಗ ಸಂಬಂಧವೇನೂ ಇಲ್ಲದಿದ್ರೂ, ನಾಳೆ ಬೆಳಿಗ್ಗೆ ಪೋಲೀಸಿನವರು ಒಂದು ಸಂಬಂಧಾನ ಗಂಟುಹಾಕಿಬಿಡ್ತಾರೆ. ನಿನಗೆ ಸಂಬಂಧವಿದ್ದ ಮನುಷ್ಯ ಗುಂತಕಲ್ ಸ್ಟೇಷನ್ನಿನಲ್ಲೇ ಸಾಯಂಕಾಲ ಇಳಿದುಬಿಟ್ಟು, ಈ ಗಾಡೀಲಿ ನಿನ್ನ ಜೊತೇಗೆ ನಾನು ಉಳುಕೊಂಡಿದ್ದರಿಂದ ರೈಲ್ವೆ

ಪೊಲೀಸಿನವರೂ, ಗಾರ್ಡೂ ಆಗನಿಂದಲೇ ನಮ್ಮಿಬ್ಬರಿಗೂ ಸಂಬಂಧ ಕಲ್ಪಿಸಿರಬಹುದು. ಅದೂ ನಾವು ಸೆಕೆಂಡ್‌ಕ್ಲಾಸ್ ಕಂಪಾರ್ಟ್‌ಮೆಂಟಿನಲ್ಲಿರೋದರಿಂದ ಇನ್ನಷ್ಟು ಅವರ ಕಣ್ಣಿಗೆ ಹೆಚ್ಚಾಗೇ ಬಿದ್ದಿರ್ತೀವಿ. ನಾಳೆ ನಿನ್ನ ಹೆಣ ಅವರ ಕಣ್ಣಿಗೆ ಬೀಳುತ್ತಲೆ ಪ್ರತಿಯೊಂದು ಸ್ಟೇಷನ್ನಿಗೂ ಸುದ್ದಿ ಹೋಗಿಬಿಟ್ಟಿರುತ್ತೆ. ಮಧ್ಯದ ಸ್ಟೇಷನ್ನುಗಳಲ್ಲೇ ರೈಲ್ವೆ ಪೋಲೀಸಿನವರು ತಮ್ಮ ಅನುಮಾನ ಪರಿಹಾರ ಮಾಡ್ಕೊಂಡು ನಾನೇ ನಿನ್ನ ಒಡವೆ ವಸ್ತು ಆಸೆಗೋ ಇಲ್ಲಾ ಇನ್ಯಾವುದಾದ್ರೂ ಕಾರಣದಿಂದ್ಲೋ ಖೂನಿ ಮಾಡಿದ್ದೇನೇಂತ ಗುಮಾನಿ ಮೇಲೆ ನನ್ನ ಹಿಡ್ಕೊಂಡ್ಹೋಗ್ತಾರೆ. ಸರಿ! ಆಮೇಲೆ ನನಗೆ ಗಲ್ಲೇ ಗತಿ. ನಿನಗೇನು ನಿಶ್ಚಿಂತೆಯಾಗಿ ಸತ್ತು ಸ್ವರ್ಗ ಸೇರಿಬಿಡ್ತಿ.'

"ಹೌದು! ನೀವೇನೂ ನನ್ನ ಕೊಲೆಮಾಡೊಲ್ಲವಲ್ಲ; ನಾನಾಗಿ ತಾನೇ ಸಾಯ್ತೀನಿ?"

"ಹೌದೂ! ಆದರೆ ಆ ಮಾತು ಪೋಲೀಸಿನೋರಿಗೆ ಮಂದಟ್ಟು ಮಾಡಿಸೋಕೆ ನೀನು ಬದುಕಿರೊಲ್ಲವಲ್ಲ? 'ಸನ್ನಿವೇಶಕ ಸಾಕ್ಷ್ಯ'ಗಳ ಜೋಮಾಲೆ ನನ್ನ ಕುತ್ತಿಗ್ಗೆ ಹಾಕಿ ನನ್ನ ಗಲ್ಲಿಗೇರಿಸೋವರ್ಗೂ ಪೋಲೀಸಿನವರಿಗೆ ನನ್ನ ಮೇಲೆ ದಾಯಾದಿ ಮಾತ್ಸರ್ಯವಿರುತ್ತೆ. ನನಗೆ ಬೆಂಬಲ ಕೊಡೋಕೆ ನನಗ್ಯಾರೂ ಶ್ರೀಮಂತ ಬಂಧುಗಳಿಲ್ಲ; ಗೊತ್ತಾಯಿತೆ? ಕಷ್ಟಪಟ್ಟು ನಾನೂ ಏನೋ ಒಬ್ಬ ಮನುಷ್ಯಾಂತ ಆಗಿದ್ದೇನೆ; ನನ್ನ ಪ್ರೇತವಾಗಿ ಮಾಡೋಕೆ ನೀನೊಬ್ಬಳು ಹುಟ್ಟಿಕೊಂಡೆ. ಈ ಹಾಳು ಗಾಡೀಗೆ ಹತ್ತಿದ ಘಳಿಗೇನ ಶಪಿಸೋದೋ, ಇಲ್ಲಾ ನಿನ್ನ ಶಪಿಸೋದೋ ನನಗ್ಯಾವುದೂ ತೋಚೊಲ್ಲ"

ಶಶಿಯ ಮುಖಭಾವ ಬದಲಾಯಿತು. 'ನಾನದನ್ನು ಯೋಚಿಸಿಯೇ ಇರಲಿಲ್ಲ" ಎಂದಳು.

"ನಿನಗಂತಹ ಯೋಚನೆಯೂ ಹೊಳೆಯೋದೇ ಇಲ್ಲಾನ್ನೋದು ಖಂಡಿತ. ಹಾಗೆ ಮುಂದಾಲೋಚನೆ ನಿನಗೆ ಇದ್ದಿದ್ರೆ ಹೀಗೆ ಒಂದು ಧಿನ ಪ್ರಾಣಾ ಕಳಕೊಳ್ಳೋ ಸಂದರ್ಭ ಬರುತ್ಲೇ ಇರಲಿಲ್ಲ."

"ನನ್ನ ವಿಷಯ ನಿಮಗೇನು ಗೊತ್ತು?" ಎಂದು ಶಶಿಯು ಮುಖ ಗಂಟಿಕ್ಕಿಕೊಂಡು ಕೇಳಿದಳು.

"ಓ! 'ಡೋಂಟ್ ಬಿ ಸಿಲ್ಲಿ'; ನನಗೆ ಪ್ರಪಂಚ ಏನೂ ಅನ್ನೋದು ಗೊತ್ತಿದೆ. ಇಲ್ದೇ ಇದ್ದಿದ್ರೆ ನಾನು ಹೀಗಿರ್ತಿರಲಿಲ್ಲ."

"ಆತ ನಿಮಗೆಲ್ಲಾ ಹೇಳಿದನೇನು?"

"ಸ್ವಲ್ಪ ಸೂಚನೆಕೊಟ್ಟ; ಉಳಿದದ್ದು ಊಹಿಸಿದೆ."

"ಆತನನ್ನೇ ಪೂರಾ ನಂಬಿದ್ದೆ; ನನ್ನ ಕೈಬಿಟ್ಟ."

"ನಿನಗೆ ತಕ್ಕ ಶಾಸ್ತಿ ಆಯಿತು. ನಿನ್ನ ಮನೆಯೋರೂ ನಿನ್ನ ಇನ್ನೂ ಹೆಚ್ಚಾಗಿ ನಂಬಿರಲಿಲ್ಲವೇನು? ಅವರ ಯೋಚನೆ ಏನಾದರೂ ಮೊದಲು ನಿನಗಿತ್ತೆ? ಅವರು ನಿನ್ನಲ್ಲಿ ಎಷ್ಟು ನಂಬಿಕೆ ಇಟ್ಟುಕೊಂಡಿದ್ದರೋ ಏನೊ; ಅದಕ್ಕೆ ತಿಲಾಂಜಲಿಕೊಟ್ಟು ನೀನು ಹೇಗೆ ಅವರ ಕೈಬಿಟ್ಯೋ ಹಾಗೇ ಆತನೂ ನಿನ್ನ ಕೈ ಬಿಟ್ಟ. ಕಳ್ಳನು ಇನ್ನೊಬ್ಬ ಕಳ್ಳನ್ನ ಕಳ್ಳಾಂತ ಬೈಯೋಕೆ ಸಾಧ್ಯವೆ?" ಎಂದು, ಗಿರೀಶನು ಮತ್ತೆ ಹೋಗಿ ತನ್ನ ಸ್ಥಾನವನ್ನಾಕ್ರಮಿಸಿಕೊಂಡು ನಿಧಾನವಾಗಿ ಒಂದು ಸಿಗರೇಟನ್ನು ಹಚ್ಚಿದ.

"ನೀವು ಆತನನ್ನೇ ವಹಿಸಿಕೊಂಡು ಮಾತನಾಡುತ್ತಿದ್ದೀರಿ; ಗಂಡಸರೆಲ್ಲಾ ಒಂದೇ. ತಪ್ಪೆಲ್ಲ ಹೆಂಗುಸರ ತಲೆ ಮೇಲೆ."

"ಅವನೇನೂ ನಮ್ಮ ಚಿಕ್ಕಪ್ಪನ ಮಗನಲ್ಲ. ಒಂದು ವೇಳೆ ಆಗಿದ್ದರೂ ಅವನ ಪರವಾಗಿ ನಾನು ಮಾತಾಡ್ತಿರಲಿಲ್ಲ. ಈಗ ಅವನ ವಿಚಾರವಲ್ಲ ನಾನು ಮಾತಾಡ್ತಿರೋದು, ನಿನ್ನ ವಿಚಾರ. ನಿನ್ನ ಜೀವನದಲ್ಲಿ-'ಹೊಸ ನೀರು ಬಂದು ಹಳೇ ನೀರ್ನ್ನೂ ಕೊಚ್ಕೊಂಡು ಹೋಯ್ತು' ಅನ್ನೋ ಹಾಗೆ ಅವನು ಮಧ್ಯೆ ಬಂದು ಇದ್ದ ನೆರಳೂ ಕಳೆದು ಸಾಕಷ್ಟು ಅವಾಂತರ ಮಾಡಿಟ್ಟು ಹೊರಟ್ಹೋದ. ಈಗ ಉಳ್ಕೊಂಡಿರೋಳೇ ನೀನು. ನಿನ್ನ ಬುದ್ಧಿ ನಿನ್ನ ಕೈಲಿಟ್ಕೊಳ್ಳದಿದ್ರೆ....?

"ನಾನು ಸಾಯೋಕೆ ಸಿದ್ಧವಾಗಿದೇನೆ; ಅದ್ರಿಂದ ನನ್ನ ವಿಚಾರ ಏನೂ ಯೋಚ್ನೆಮಾಡೋಕೆ ನಾನು ಹೋಗಿಲ್ಲ."

"ಸಾಯ್ಲೇಬೇಕೂಂತನ್ನೋ ಆಸೆ ಇದ್ರೆ ಬೊಂಬಾಯಿಯಲ್ಲಿ ನಾನು ಹೋಗ್ತೇನೆ. ಆಮೇಲೆ ನೀನು ಇನ್ಯಾವುದಾದ್ರೂ ರೈಲು ಹತ್ತಿ ಧಾರಾಳವಾಗಿ ಹಾರಿಕೊಂಡು ಪ್ರಾಣ ಬಿಡು. ಆದರೆ ಇನ್ಯಾರಾದರೂ ನನ್ಹಾಗೇ ಒಬ್ಬ ಬಡಪಾಯಿ ಅಲ್ಲಿದ್ದು ನಿನ್ನಿಂದ ಅವನೂ ಸಾಯ ಬೇಕಾದರೆ ದೇವರೇ ಅವನ್ನ ಕಾಪಾಡಬೇಕು.——ನೀನು ಸ್ವಸ್ಥವಾಗಿ ಸಮುದ್ರದಲ್ಲಿ ಮುಳುಗಿ ಸಾಯೋ ಯೋಚನೆ ಏಕೆ ಮಾಡಬಾರ್ದು? ಅದರಿಂದ ಯಾರಿಗೂ ತೊಂದ್ರೆ ಇರೊಲ್ಲ. ನಿನ್ನ ಹೆಣ ಒಂದುದಿನ ತೇಲ್ತಾ ಬಂದು ಎಲ್ಲಾದರೂ ತೀರದಲ್ಲಿ ಒಂದುಕಡೆ ಬಿದ್ದಿರುತ್ತೆ. ಯಾರಿಗೂ ನಿನ್ನ ಗುರ್ತಿರೊಲ್ಲ. ಯಾವುದೋ ಬೇವಾರಸು ಹೆಣಾಂತ ಪೋಲೀಸಿನವರು ಮುನಿಸಿಪಾಲಿಟೀ ವಶಕ್ಕೊಪ್ಪಿಸಿಬಿಡ್ತಾರೆ........ಏಕೆ ಹಾಗೆ ಮಾಡಬಾರದು?"

ಶಶಿಯ ಕಣ್ಣುಗಳಲ್ಲಿ ಪಳ್ಳನೆ ನೀರುಕ್ಕಿಬಂತು. "ಯಾಕಿಷ್ಟು ಚಾಕುವಿನಿಂದ ಇರಿದಹಾಗೆ ಮಾತಾಡ್ತೀರಿ? ನನ್ನ ಪಾಡು ನನ್ನದು. ನಾನು ಹೇಗಾದರೂ ಸಾಯ್ತೇನೆ, ನಿಮಗೇನು ಅದನ್ನ ಕಟ್ಟಿಕೊಂಡು?" ಎಂದಳು.

"ಸಾಯೋದೇನೂ ಮಹಾ ಹೆಚ್ಚುಗಾರಿಕೆಯಲ್ಲ; ಅಪ್ಪಿತಪ್ಪಿ ನಾವೇನೋ ಮನುಷ್ಯರಾಗಿ ಹುಟ್ಟಿದ್ದೀವಿ. ಹುಟ್ಟಿದಮೇಲೆ ಸಾಯೋದು ಖಂಡಿತ. ಹಾಗೇ ನಾವು ಆಗಾಗ ತಪ್ಪುಗಳನ್ನು ಮಾಡೋದೂ ಇನ್ನಷ್ಟು ಖಂಡಿತ. ಆದರೆ ಒಂದು ಸಲ ತಪ್ಪಿದಾಕ್ಷಣಕ್ಕೇ ಪ್ರಪಂಚಾನೆ ಮುಳುಗಿಹೋಯ್ತೂಂತ ಹೋಗಿ ಪ್ರಾಣಾ ಕಳಕೊಳ್ಳೋದರಲ್ಲೇನೂ ಅರ್ಥವಿಲ್ಲ. ಎಡವಿ ಗಾಯವಾದರೆ, ವಿಧಿವಶಾತ್ ಆದ ಆ ಗಾಯಾನ ವಾಸಿ ಮಾಡಿಕೊಂಡು ಮತ್ತೆ ಎಡವದಹಾಗೆ ನಡೆಯೋದೇ ಬುದ್ಧಿ

ವಂತಿಕೆ. ಅದು ಬಿಟ್ಟು ನಡೆಯೋದೇ ನಿಲ್ಲಿಸಿಬಿಟ್ರೆ ಅದು ಮಂಕುತನ. ಹುಚ್ಚರೂಂತಾರೆ. ಇರಬೇಕು-ಇದ್ದು ಗೆಲ್ಲಬೇಕು."

"ಸರಿ! ಆಯಿತು ಇದ್ದು ಮುಂದೆ ನಾನೇನು ಮಾಡಬೇಕೂಂತ ನಿಮ್ಮಭಿಪ್ರಾಯ ?"

"ಅದು ನಿನ್ನ ತಲೆಗೆ ಹತ್ತಿದ್ದು. ನನಗೇನು, ಏನುಬೇಕಾದರೂ ಮಾಡಿಕೊ. ಹಳ್ಳಕ್ಕೆ ಬಿದ್ದೋಳು ನೀನು ; ಮೇಲಕ್ಕೆ ಬರೋ ದಾರಿ ನೀನೇ ಹುಡುಕಿಕೋಬೇಕು."

"ದಯವಿಟ್ಟು ನನ್ನ ಮನಸ್ಸಿಗಿನ್ನಷ್ಟು ನೋವುಂಟುಮಾಡಬೇಡಿ; ನನ್ನ ಸ್ಥಿತಿ ನೋಡೀನೂ ನೀವು ಹೀಗೆ ಪದೇ ಪದೇ ಕೊರಳು ಕೊಯ್ಯುತ್ತ ಹೋಗಬೇಡಿ." ಎಂದು ಶಶಿಯು ಗದ್ಗದ ಸ್ವರದಿಂದ ನುಡಿದುದನ್ನು ಕೇಳಿ, ಗಿರೀಶನು ತಟಕ್ಕನೆ ತನ್ನ ಸಿಗರೇಟಿನ ಹೊಗೆಯ ಕಡೆಯಿಂದ ಅವಳ ಮುಖದ ಕಡೆ ದೃಷ್ಟಿ ಹೊರಳಿಸಿ "ನಾನು ನಿಜವಾದ ಮಾತುತಾನೆ ಹೇಳಿದ್ದು ?" ಎಂದು ಕೇಳಿದ. ಶಶಿಯು ಅಳು ತಡೆಯಲಾರದೆ ತನ್ನ ಸೆರಗಿನಿಂದ ಮುಖ ಮುಚ್ಚಿಕೊಂಡಳು. ಗಿರೀಶನು ಮತ್ತೆ ಎದೆಗೆಟ್ಟು ಕಕ್ಕಾಬಿಕ್ಕಿಯಾದ. ಅವನ ದೃಷ್ಟಿಗೆ ಟೀ ಲೋಟಗಳು ಬಿದ್ದವು. ಅದನ್ನು ಸಂಪೂರ್ಣವಾಗಿ ಮರತೇ ಬಿಟ್ಟಿದ್ದ. ಈಗ ಮತ್ತೆ ಅದರ ಕಡೆಗೆ ಗಮನಕೊಟ್ಟ. ಟೀ ಅರ್ಧ ಮುಕ್ಕಾಲು ತಣ್ಣಗಾಗಿತ್ತು. ಮತ್ತೆ 'ಫ್ಲಾಸ್ಕಿ'ನಲ್ಲಿದ್ದುದನ್ನು ಅದಕ್ಕೆ ಬೆರೆಸಿ ಸರಿಮಾಡಿಕೊಂಡು, "ಇಗೋ! ಈ ಟೀ ಕುಡಿ" ಎಂದು ಒಂದು ಬಟ್ಟಲನ್ನು ಎರಡನೆಯಬಾರಿ ಶಶಿಯ ಮುಂದೆ ಹಿಡಿದ. ಶಶಿಗೆ ಕೋಪ ಬಂತು. "ಏನು ಟೀ-ಟೀ-ಟೀಂತ ನನಗೆ ಬಲವಂತ ಮಾಡ್ತೀರಿ ? ನಿಮಗೆ ಬೇಕಿದ್ರೆ ನೀವು ತಕೊಳ್ಳಿ ; ನನಗೆ ಬೇಡ" ಎಂದಳು.

ಗಿರೀಶನು ಗಂಭೀರವಾದ, ಗಡುಸುದನಿಯಲ್ಲಿ "ತೆಗೆದುಕೋ" ಎಂದವಳಕಡೆ ತೀಕ್ಷ್ಣ ದೃಷ್ಟಿಬೀರಿದ. ಶಶಿಯು ತಲೆಯೆತ್ತಿ ಅವನ

ಕಡೆ ನೋಡಿದಳು. ಅವಳ ನೋಟದಲ್ಲಿ ದೈನ್ಯತೆಯು ಮೂಡಿತ್ತು. ಅವಳ ಆಗಿನ ಅಸಹಾಯಕತೆಯು ಮುಖಮುದ್ರೆಯಲ್ಲಿ ಸ್ಪಷ್ಟವಾಗಿ ಎದ್ದು ಕಾಣುತ್ತ, 'ದಯವಿಟ್ಟು ಇಷ್ಟು ಕಲ್ಲು ಮನಸ್ಸಿನವರಾಗಬೇಡಿ. ನಿಮ್ಮ ಹೃದಯದ ನುಡಿಗೂ ಸ್ವಲ್ಪ ಮನ್ನಣೆ ಕೊಡಿ' ಎಂದು ಗಿರೀಶನನ್ನು ಪ್ರಾರ್ಥಿಸುವಂತಿತ್ತು.

ಗಿರೀಶನ ಮುಖವು ಕೊಂಚ ಕೆಂಪೇರಿತು. ಅವನ ಮನಸ್ಸು ಕದಡಿಹೋಗಿ ಅಸ್ತವ್ಯಸ್ತವಾಯಿತು. "ಅಯಾಂ ಸಾರಿ. ನಾನೀಗ ನಿಮ್ಮ ವೈದ್ಯಾಂತ ಭಾವಿಸ್ಕೊಳ್ಳಿ. ವೈದ್ಯರು ಹೇಳಿದಹಾಗೆ ರೋಗಿಗಳು ಕೇಳಬೇಕು. ಮೊದಲು ಈ ಟೀ ಕುಡೀರಿ. ಮನಸ್ಸಿಗೆ ಸ್ವಲ್ಪ ಸಮಾಧಾನವಾಗಲಿ; ಆಮೇಲೆ ಮಾತಾಡೋಣ" ಎಂದ.

ಶಶಿಯು, "ನಿಮಗೀಗ ಮುಖ್ಯವಾಗಿ ಟೀ ಕುಡಿಯಬೇಕೆನ್ನಿಸಿದೇಂತ ಕಾಣುತ್ತೆ. ನನಗೇಕೆ ಈ ಬಲವಂತ? ನೀವು ಕುಡಿಯಬಾರದೇನು?" ಎಂದು ಕೇಳಿದಳು.

"ಬೆಳಿಗ್ಗೆ ನಾನೆದುರಿಗಿದ್ದಾಗ ಹೇಗೆ ನಿಮ್ಮಪಾಡಿಗೆ ನೀವು ಕಾಫಿ ತಕ್ಕೊಳ್ಳೋಕೆ ಹಿಂಜರಿದಿರೋ ಹಾಗೇ ನಾನೂ ಈಗ ಹಿಂಜರೀತಿದೇನೆ" ಎಂದುತ್ತರಕೊಟ್ಟ, ಗಿರೀಶ.

ಶಶಿಯು ಆ ದುಃಖದ ಭರದಲ್ಲೂ ಒಂದು ಕಿರುನಗೆ ಬೀರಿ, "ನಿಮಗೆ ಹೃದಯಾನ್ನೋದೇ ಇಲ್ಲಾಂತಿದ್ದೆ" ಎಂದು ಟೀ ಬಟ್ಟಲನ್ನು ತೆಗೆದುಕೊಂಡಳು. ಗಿರೀಶನು ತಾನೇಕೋ ಕ್ರಮವಾಗಿ ಸೋಲುತ್ತಿರುವುದಾಗಿ ಭಾವಿಸಿದನು. ಅವನ ಮನಸ್ಸು ಈ ಸೋಲನ್ನು ಪ್ರತಿಭಟಿಸಿತು. ಅವನು ಮತ್ತೆ ತನ್ನ ನಿಶ್ಚಿಂತ ಮನೋಭಾವವನ್ನು ಸಾಧಿಸಿಕೊಳ್ಳಲು ಪ್ರಯತ್ನಿಸಿದನು.

"ಮೆಲ್ಲನೆ ನನ್ನ ಹೊಗಳಿ ಬಲೆಗೆ ಸಿಕ್ಕಿಸಿಕೊಳ್ಳೋಕೇನೂ ಪ್ರಯತ್ನಿಸಬೇಡಿ. ನಾನವಕ್ಕೆಲ್ಲ ಮೋಸಹೋಗೊಲ್ಲ."

" ನಾನೇನೂ ಆ ಪ್ರಯತ್ನಾನೇ ಮಾಡಲಿಲ್ಲವಲ್ಲ, ನನ್ನ ಮನಸ್ಸಿಗೇನು ತೋಚಿತೋ ಅದನ್ನು ಹೇಳಿದೆ." ಎಂದು ನಿಧಾನವಾಗಿ ಟೀ ಸೇವಿಸುತ್ತ "ಏನು ಆಮೇಲೆ ಮಾತಾಡೋಣಾಂತ ಅಂದಿದ್ರಲ್ಲಾ ?" ಎಂದು ಶಶಿಯು ಕೇಳಿದಳು.

"ಏನೂ ಇಲ್ಲ. ನೀವು ಆಗಿಹೋದದ್ದನ್ನ ಕಟ್ಟಕ್ಕೊಂಡು ಅಳ್ತಿದ್ದೀರೇ ಹೊರ್ತು ಮುಂದೇನು ಮಾಡಬೇಕೂನ್ನೋದನ್ನ ಯೋಚಿಸ್ಲಿಲ್ಲ."

" ಹೌದು ! ಮುಂದೆ ಮಾಡೋದಾದ್ರೂ ಏನಿದೆ ಯೋಚಿಸೋಕೆ? ಇದ್ದದ್ದೊಂದೇ ದಾರಿ – ಅದರಿಂದ ನೀವೇ ತಡೆದಿರಿ."

" ಬೊಂಬಾಯಿಯಲ್ಲಿ ನಿಮ್ಮೋರು ಯಾರಿದ್ದಾರೆ ?"

"ಯಾರೂ ಇಲ್ಲ. ಆತ ತನ್ನ ಕಡೆಯೋರಿದ್ದಾರೆ; ಅಲ್ಲಿ ಹೋಗಿಳಕೊಳ್ಳೋಣಾಂತ ಹೇಳಿ ಕರೆತಂದ."

" ಹುಂ! ಹಾಗಾದರೆ ಈಗ ಏನು ಮಾಡ್ತೀರಿ ?"

" ಬೊಂಬಾಯಿಯಲ್ಲಿ ನನ್ನಂಥಾವರಿಗೆ ಜಾಗ ಸಿಕ್ಕೋ ಆಶ್ರಮ-ಗೀಶ್ರಮ ಯಾವುದೂ ಇಲ್ವೇ ?"

"ಆಶ್ರಮಗಳಿಗೇನು ಬೇಕಾದ ಹಾಗಿವೆ. ಕೆಲವೆಲ್ಲಾ ಹೆಸರಿಗೆ ಮಾತ್ರ ಆಶ್ರಮಗಳಾಗಿವೆ ; ಅಲ್ಲಿರೋ ಹೊಲಸು ಇನ್ನೆಲ್ಲೂ ಇಲ್ಲ."

"ಹಾಗಾದರೆ ನಿಮಗೆ ಯಾವುದು ಒಳ್ಳೇ ಆಶ್ರಮಾಂತ ಕಂಡು ಬಂದಿದ್ಯೋ ಅಲ್ಲಿ ನನ್ನ ಕರಕೊಂಡು ಹೋಗಿ ಸೇರಿಸಿಬಿಡಿ."

ಗಿರೀಶನು ಬೆಚ್ಚಿಬಿದ್ದು "ಏನೂ? ನಾನೇ? ಜನ್ಮೇಪಿ ಇಲ್ಲ; ನಾನು ನಿನ್ನನ್ನಲ್ಲಿಗೆ ಕರಕೊಂಡ್ಹೋಗಿ ಸೇರಿಸೋಕೆ ಪ್ರಯತ್ನ ನಡೆಸಿದೆ ಅವರು ನನ್ನ ವಿಚಾರ ಏನಂದ್ಕೊಂಡಾರು? ಆ ಮಾತು ಸುತರಾಂ ಆಗೋ ಅಂಥಾದ್ದಲ್ಲ. ನನ್ನಿಂದ ಅದಾಗೋದೇ ಇಲ್ಲ" ಎಂದ.

"ಹೋಗಲಿ! ದೂರದಿಂದ ಆಶ್ರಮಾನ ನನಗೆ ತೋರಿಸಿ ಹೋಗಿ."

"ಅದಾಗಬಹುದು. ಆದರೆ ನೀನು ಆಶ್ರಮದಲ್ಲಿದ್ದಾಗ ಆತನೇನಾದರೂ ಪಶ್ಚಾತ್ತಾಪಪಟ್ಟು ಕರಕೊಂಡ್ಹೋಗೋಕೆ ಬಂದರೆ....?"

"ಯಾರೂ ಒಂದುಬಾರಿ ಸುಟ್ಟುಕೊಂಡ ಕಡೇನೆ ಇನ್ನೊಂದು ಸಲ ಸುಟ್ಟುಕೊಳ್ಳೊಲ್ಲ."

"ಏನೋ ಒಂದ್ವೇಳೆ ಅವನು ಬಂದು ತನ್ನ ತಪ್ಪೊಪ್ಪಿಕೊಂಡು ಕ್ಷಮಾಪಣೆ ಕೇಳಿಕೊಂಡ್ರೆ ?"

"ಹೆಂಗಸು ಒಂದುಸಲ ಮಾತ್ರ ನಂಬಿ ಸೋಲುವಳು. ಆ ನಂಬಿಕೆಗೆ ದ್ರೋಹಮಾಡಿದರೆ ಆ ಅವಮಾನಾನ ಅವಳೆಂದೆಂದಿಗೂ ಮರೆಯೊಲ್ಲ. ಆಮೇಲೆ ಎಚ್ಚರಿಕೆಯಿಂದ ಇರ್ತಾಳೆ...........ನಿಮಗೆ ಮದುವೇ ಆಗಿಲ್ವೇನು ?"

'ಆಗಿದೆ. ಅದನ್ಕಟ್ಕೊಂಡು ನಿಮಗೇನು ?'

"ನನಗೇನೂ ಇಲ್ಲ. ಅವರು ನಿಮ್ಜೊತೇಲಿ ಸಂಸಾರ ಮಾಡ್ಕೊಂಡ್ಹೋಗೋಕೆ ಅದೆಷ್ಟು ಕಷ್ಟಪಡ್ತಿದಾರೋ ಕಾಣೆ."

"ಕಷ್ಟಾ ಏಕೆ ಪಡಬೇಕು ?"

"ಅವರೂ ನಿಮ್ಹಾಗೇ ಒಬ್ಬ ಮನುಷ್ಯರೂಂತ ತಿಳ್ಕೊಳ್ಳೋ ಜಾತೀಗೆ ನೀವು ಸೇರಿದೋರಲ್ಲ. ನಿಮ್ಮ ಮನಸ್ಸು ಏನು ಹೇಳುತ್ತೋ ಅದರಂತೆ ನಡೆಯೋಹಾಗೆ ನಿಮ್ಮ ಹೃದಯಕ್ಕೆ ಕಲಿಸಿದ್ದೀರಿ. ಅದೂ ಒಂದು ಯಂತ್ರದಹಾಗೆ ಆಗಿಹೋಗಿದೆ. ಅವರು ನಿಮ್ಮನ್ನೇ ಅನುಸರಣೆ ಮಾಡಿಕೊಂಡು ಹೋಗೋಹಾಗೆ ಕಾಣುತ್ತೆ. ಅಥವಾ ಅವರು ನಿಮ್ಮ ಹತ್ತಿರಾನೆ ಇಲ್ದೇ ಇದ್ರೂ ಇರಬಹುದು. ಆದ್ದರಿಂದ ನಿಮಗಿನ್ನೂ ಹೆಂಗಸರ ವಿಚಾರ ತಿಳೀದು."

"ನನಗೆ ಹೆಂಗಸರ ವಿಚಾರ ತಿಳೀದೋ-ತಿಳಿದಿದ್ಯೋ ಆ ವಿಚಾರ ಈಗೇಕೆ ? ಈಗ ನಿನ್ನ ಮಾತು ಆಡ್ತಾ ಇರೋದು. ನೀನು ಬೊಂಬಾಯಲ್ಲಿ ಇಳಿದ ತಕ್ಷಣಾನೇ ನಿನ್ನ ಆಶ್ರಮಕ್ಕೆ ಸೇರಿಸಿಕೊಂಡು ಬಿಡೋಕೆ ಎಲ್ಲರೂ ಕಾದಿದ್ದಾರೇಂತ ತಿಳ್ಕೊಂಡಿದ್ದೀಯೇನು ? ಕನಿಷ್ಟ ಪಕ್ಷ ಎರಡು ಮೂರು ದಿನಗಳಾದರೂ ಅಲೀಬೇಕು. ಆ ಮೇಲೆ ಅದೂ ಯಾರಾದರೂ ನಿನ್ನ ನಡತೆ ಸಂಬಂಧದಲ್ಲಿ 'ಸರ್ಟಿಫಿಕೇಟು' ಕೊಟ್ರೆ ........ತಪ್ಪಾಯಿತು. ಮಾತಾಡ್ತಾ ಮಾತಾಡ್ತಾ ನನ್ನ ಬಾಯಲ್ಲಿ ಏಕವಚನ ಪ್ರಯೋಗಗಳೇ ಬಂದುಬಿಡುತ್ತೆ"

"ಬಂದರೇನೂ ಪರವಾಯಿಲ್ಲ ಬಿಡಿ. ವಯಸ್ಸಿನಲ್ಲಿ ನೀವು ನನಗಿಂತ ದೊಡ್ಡೋರೆ ತಾನೆ !....'ಸರ್ಟಿಫಿಕೇಟು' ನೀವೇ ಕೊಡಿ."

"ಏಕೆ ? ಕೊಟ್ಟು ಆ ಮೇಲೆ ಸಿಕ್ಕಿಹಾಕ್ಕೊಳ್ಳೋಕೇನು ? ಅದು ಸಾಧ್ಯವೇ ಇಲ್ಲ. ನೀನು ನಿಮ್ಮೂರಿಗೆ, ನಿಮ್ಮ ತಂದೆತಾಯಿಗಳ ಹತ್ತಿರಕ್ಕೇ ಯಾಕೆ ಹಿಂತಿರುಗಿ ಹೋಗ್ಬಾರದು ?"

"ಮೊದಲೇ ಅದೆಲ್ಲ ಪ್ರಯತ್ನ ಮಾಡಿದ್ದಾಯಿತು? ಅವರ ಪಾಲಿಗೆ ನಾನು ಸತ್ತೇಂತ ಅವರು ಭಾವಿಸಿರೋದಾಗಿ ಅವರಿಂದ ಉತ್ತರಾನೂ ಪಡೆದಾಯಿತು."

"ಹಾಗಾದರೆ ನಿನ್ನ-ಆತನ ಸಂಬಂಧ ಎಲ್ಲಿಯವರೆಗೂ ಹೋಗಿದೆ ?"

"ಪ್ರಾಣಾ ಕಳಕೊಳ್ಳೋದೇ ಇನ್ನುಳಿದಿರೋ ಉಪಾಯಾಂತ ನಿರ್ಧರಿಸೋವರೆಗೆ."

"ಹಾಗಿದ್ದರೆ ನಿನಗೆ ಆಶ್ರಮದಲ್ಲೂ ಜಾಗ ಸಿಕ್ಕೊಲ್ಲ. ಸಿಕ್ಕೋ ಜಾಗ ಆಶ್ರಮವಲ್ಲ." ಎಂದು ಗಿರೀಶನು ಒಂದೆರಡು ನಿಮಿಷ ಕಣ್ಣು ಮುಚ್ಚಿ ಕುಳಿತ. ಆಮೇಲೆ ತಟಕ್ಕನೆ ಶಶಿಯ ಮುಖ ನೋಡಿ, "ನಿನಗೆ ನಾನು ಸಹಾಯಮಾಡಬೇಕೇನು ?" ಎಂದು ಕೇಳಿದ.

"ನಿಮ್ಮಣ್ಣ ವೈದ್ಯರೂಂತ ಭಾವಿಸೋಹಾಗೆ ಆಗಲೇ ಹೇಳಿದ್ರಿ? ಸಹಾಯ ಮಾಡಿದರೆ ಸಂತೋಷ. ಸಾಯೋತಂಕ ನಿಮಗೆ ಋಣಿ ಯಾಗಿರ್ತೀನಿ."

"ನನ್ನ ನಂಬಬಲ್ಲೆಯಾ?"

ಶಶಿಯು ಒಂದು ಕ್ಷಣ ಎವೆಯಿಕ್ಕದೆ ಗಂಭೀರವಾಗಿ ಅವನ ಕಣ್ಣುಗಳನ್ನೇ ನೋಡಿ, "ನಂಬುತ್ತೇನೆ" ಎಂದಳು.

"ನಾನೂ ಆತನಹಾಗೇ ನಿನ್ನ ಕೈ ಬಿಟ್ಟುಬಿಟ್ರೆ?"

"ಆಗ ನೀವು ಹೇಳಿದ ಹಾಗೆ ಸಮುದ್ರವಿದ್ದೇ ಇದೆಯಲ್ಲಾ?"

"ನನ್ನ ಸಹಾಯ ಬೇಕಾದರೆ ನಾನು ಹೇಳಿದ ಹಾಗೆ ಚಾಚೂ ತಪ್ಪದೆ ನಡಕೋಬೇಕು. ನನ್ನ ಹೆಸರಿಗೆ ಒಂದು ಚೂರು ಕಳಂಕ ಬಂತೂಂದರೆ ನಾನು ೧೦ ವರ್ಷದಿಂದ ಬೆವರು ಸುರಿಸಿ ಬೊಂಬಾಯಲ್ಲಿ ಸ್ಥಾಪಿಸ್ಕೊಂಡಿರೋ ನನ್ನ 'ಬಿಸಿನೆಸ್' ಹಾಳಾಗಿ ಹೋದ್ಹಾಗೇನೆ. ಆಮೇಲೆ ನನಗಿಲ್ಲಿ ಮೂರು ಕಾಸಿಗೆ ಬೆಲೆ ಇರೋಲ್ಲ. ಅದನ್ನ ಮರೀದೇ ನನಗೆ ಮಾನಾ ಉಳಿಯೋಹಾಗೆ ನಡೆಕೊಳ್ಳೋಹಾಗಿದ್ರೆ ನನ್ನ ಮನೇಲೇ ಇರಬಹುದು. ಹೇಳು, ನಿನಗೆ ಒಪ್ಪಿಗೇನೇ?"

"ನಾನು ನಿಮ್ಮ ಜೊತೇಲಿ ಬಂದ್ರೆ ನಿಮ್ಮ ಹೆಂಡತಿ ಏನೂ ಅಂದ್ಕೊಳ್ಳೊಲ್ವೆ?"

"ನನ್ನ ಹೆಂಡತಿ ಬೊಂಬಾಯಲ್ಲಿಲ್ಲ. ತನ್ನ ತವರುಮನೇಲಿ ದ್ದಾಳೆ. ನನ್ನ ನೆರೆಹೊರೇಲಿರೋ ಸ್ನೇಹಿತರ ಹೆಂಡತಿಯರು ನನ್ನನ್ನ ಅವರ ಅಣ್ಣತಮ್ಮಂದಿರಿಗಿಂತ ಹೆಚ್ಚು ವಿಶ್ವಾಸದಿಂದ ನೋಡಿಕೊಳ್ತಾರೆ. ಅವರಿಗೇನಾದರೂ ನಿನ್ನ ನಡೆನುಡೀಯಿಂದ ನನ್ನ ನಡತೇ ಮೇಲೆ ಅನುಮಾನ ಬಂದರೆ ಆಮೇಲೆ ನಾನು ತಲೆಎತ್ತೋಹಾಗಿರೊಲ್ಲ. ಅದಕ್ಕೋಸ್ಕರ ಈಗಲೇ ನಿನಗೆ ಎಚ್ಚರಿಕೆ ಕೊಟ್ಟಿದ್ದೇನೆ."

"ಅಂದರೆ, ನನಗೆ ಸರಿಯಾಗಿ ಅರ್ಥವಾಗ್ಲಿಲ್ಲ."

"ಹಾಗಂದರೆ, ನಿನ್ನ ನಾನು ಮನೇಲಿ ಬಿಟ್ಟು ನನ್ನ ಕೆಲಸದ ಮೇಲೆ ಹೋಗಿರುವಾಗ ಅಳ್ತಾ ಮಾಡ್ತಾ ಕೂತಿರೋದು ಏನಾದ್ರು ಆ ಹೆಂಗಸರ ಕಣ್ಣಿಗೆ ಬಿದ್ರೆ, ಅಥವಾ ಮತ್ತೆ ನೀನೇನಾದ್ರೂ ಮತಿಗೆಟ್ಟು ಮಹಡಿ-ಗಿಹಡಿಯಿಂದ ಹಾರಿಕೊಂಡು ಪ್ರಾಣಬಿಟ್ರೆ ನನ್ನ ಗತಿ ಅಲ್ಲಿಗೆ ಮುಗಿದ ಹಾಗೇಂತ; ನಿನಗೆ ಉಪಕಾರ ಮಾಡೋಕೆ ಹೋದ ತಪ್ಪಿಗೆ ನಾನು ದಂಡ ತೆರಬೇಕಾಗಿ ಬರುತ್ತೆ. ಆದ್ರಿಂದ ನೀನು ಹಾಗೇನೂ ಹುಚ್ಚು ಹುಚ್ಚಾಗಿ ಮಾಡೊಲ್ಲಾ, ನಗನಗುತ್ತಾ ಸಂತೋಷದಿಂದ ಇರ್ತೀನೀಂತ ನನಗೆ ಮಾತುಕೊಡಬೇಕು."

ಶಶಿಯು ಸ್ವಲ್ಪ ನಕ್ಕಳು. ಅವಳ ಮುಖದಲ್ಲಿ ಚಿತ್ರಿತವಾಗಿದ್ದ ವೇದನೆಯು ಬಹುಮಟ್ಟಿಗೆ ಮಾಯವಾಯಿತು. "ಆಗಲಿ ಮಾತು ಕೊಡ್ತೇನೆ. ಜೀವನಕ್ಕಂಟಿಕೊಂಡಿರೋಕೆ ನನಗೇನಾದರೂ ಒಂದು ಆಧಾರ ಬೇಕಾಗಿತ್ತು. ನಿನ್ನ ಕಷ್ಟ-ಸುಖಗಳಿಗೆ ನಾನಿದ್ದೇನೆ, ಭಯಪಡಬೇಡಾಂತ ಹೇಳೋರೊಬ್ಬರು ನನಗೆ ದಿಕ್ಕಿರಲಿಲ್ಲ. ನೀವು ನನಗೆ ಆ ಭಾಗ್ಯ ಒದಗಿಸೋವಾಗ ನಿಮಗೆ ದ್ರೋಹಮಾಡಲೆ?" ಎಂದಳು. ಅವಳ ಕಣ್ಣಿನಲ್ಲಿ ನೀರುಕ್ಕಿಬರುವ ಚಿಹ್ನೆ ಕಂಡಿತು. ಅವಳ ಮೂಗಿನ ತುದಿಯು ಕೆಂಪೇರಿತು. ಗಿರೀಶನಿಗೆ ಗಾಬರಿಯಾಗಿ "ಅಗೋ! ಅಗೋ!! ಇಲ್ಲೇ ಮತ್ತೆ ಆರಂಭವಾಗೋ ಹಾಗಿದೆ. ಏನಾದರೂ ಅತ್ತುಗಿತ್ತರೆ ನಾನು ಹೇಳಿದ್ದೆಲ್ಲಾ ವಾಪ್ಸು ತಕೋತೇನೆ" ಎಂದು ಕಣ್ಣುಗಳಲ್ಲಿ ಕುಚೇಷ್ಟೆಯ ದೃಷ್ಟಿ ಬೀರುತ್ತಾ ನುಡಿದ. ಆಮೇಲೆ ಗಡಿಯಾರ ನೋಡಿಕೊಂಡು ಬೆಪ್ಪಾಗಿ ಶಶಿಯಕಡೆ ತಿರುಗಿ, "ಮೂರೂ ಕಾಲು ಘಂಟೆ! ದೇವ್ರೇಗತಿ. ಎಷ್ಟೊತ್ತು ಮಾತಾಡ್ತಾ ಕೂತ್ಬಿಟ್ಟಿದೀವಿ. ಹೊಟ್ಗಿ, ಸೊಲ್ಲಾಪುರ್ ಸ್ಟೇಷನ್ನುಗಳು ಕಳೆದುಹೋದ್ದೇ ಗೊತ್ತಾಗ ಲಿಲ್ಲ. ಇನ್ನೇನು ಆರೇಳು ನಿಮಿಷಕ್ಕೆ ಕುರ್ದುವಾಡಿ ಸ್ಟೇಷನ್ನು ಬರುತ್ತೆ. ಮೊದಲು ಒಂದಷ್ಟು ಏನಾದರೂ ಹೊಟ್ಟೆಗೆ ಹಾಕಿಕೊಳ್ಳೋಕೆ ಪ್ರಯತ್ನ ಮಾಡೋಣ ಕುರ್ದುವಾಡೀಲಿ ಕಾಫಿ ಸಿಕ್ಕಬಹುದು"

ಎಂದು ಸಂಜೆ ತಾನು ತೆಗೆಸಿಟ್ಟುಕೊಂಡಿದ್ದ ಇಡ್ಲಿ ಪೊಟ್ಟಣವನ್ನು ಬಿಚ್ಚಿದ. ಅದು ಕೆಟ್ಟವಾಸನೆ ಹೊಡೀತಿತ್ತು. ಅಸಹ್ಯಗೊಂಡು ಅದನ್ನು ಕಿಟಕಿಯಿಂದಾಚೆ ಎಸೆದ. ಅವನ ಆಗಿನ ಮುಖವಿಕಾರವನ್ನು ನೋಡಿ ಶಶಿಗೆ ನಗು ಬಂದಿತು, ಚೆನ್ನಾಗಿಯೇ ನಕ್ಕಳು. ತನ್ನ ದುಃಖವನ್ನೆಲ್ಲ ಮರೆಯುತ್ತಾ ಬಂದಿದ್ದಾಳೆಂದು ಗಿರೀಶನಿಗನ್ನಿಸಿತು. ಅವನೂ ಹಾಸ್ಯವಾಗಿ ಅದೂ ಇದೂ ಮಾತನಾಡುತ್ತಾ ಹಣ್ಣಿನಬುಟ್ಟಿ ತೆಗೆದು ಕೆಲವು ಕಿತ್ತಳೆಹಣ್ಣುಗಳನ್ನೂ, ಸೇಬಿನ ಹಣ್ಣುಗಳನ್ನೂ ತೆಗೆದು ಅವಳಿಗಷ್ಟು ಕೊಟ್ಟು ತಾನಷ್ಟು ತೆಗೆದುಕೊಂಡ.

ಹಣ್ಣುಗಳನ್ನು ತಿನ್ನುತ್ತಿದ್ದಾಗ ಕುರ್ದುವಾಡಿ ಸ್ಟೇಷನ್ನಿಗೆ ರೈಲು ತಲಪಿತು. ಕೂಡಲೇ ಗಿರೀಶನು -ದೀಪವಾರಿಸಿಬಿಟ್ಟ. ಶಶಿಯು "ದೀಪಾನ್ಯಾಕೆ ಆರಿಸಿದ್ರಿ ?" ಎಂದು ಕೇಳಿದಳು. ಗಿರೀಶನು "ಮಲಗಿಕೊಂಡುಬಿಡು. ಈ ಹೊತ್ತಿನಲ್ಲಿ ನಾವು ದೀಪ ಹಚ್ಕೊಂಡು ಕೂತಿದ್ರೆ ನೋಡಿದವರು ಏನಾದರೂ ತಿಳಕೊಳ್ತಾರೆ. ಅದಕ್ಯಾಕೆ ಅವಕಾಶ ಕೊಡ್ಬೇಕು. ಸಭ್ಯರಹಾಗೆ ನಡಕೊಂಡ್ರೆ ತಂಟೇನೇ ಇಲ್ಲ.'' ಎಂದು ಮೆಲ್ಲನುಸುರಿ ತನ್ನವಾಡಿಗೆ ತಾನು ಕಾಲುಚಾಚಿ ಬಿದ್ದುಕೊಂಡುಬಿಟ್ಟ. ಒಂದು ನಿಮಿಷ ತಡೆದು ಆಮೇಲೆ ಶಶಿಯೂ ಆತನ ಮೇಲ್ಪಂಕ್ತಿಯನ್ನೇ ಅನುಸರಿಸಿದಳು. ಆದರೆ ಸುಮ್ಮನಿರಲಿಲ್ಲ. "ಹೊಟ್ಟೆಯೋಚ್ನೆ ಮರೆತುಬಿಟ್ರಾ ? ಸ್ಟೇಷನ್ನಿನಲ್ಲಿ ಗಾಡಿ ನಿಲ್ಲುತ್ತಲೂ ಕಾಫಿ ತರಿಸ್ಕೋಬೇಕೂಂತಿದ್ರಿ ; ತರಿಸಿಕೊಳ್ಳಿ. ನನ್ನಿಂದ ಮಧ್ಯಾಹ್ನದಿಂದ ನೀವು ಉಪವಾಸ ಇದ್ದೀರಿ.'' ಎಂದು ತಾನೂ ಮೆಲುದನಿಯಲ್ಲೇ ನುಡಿದಳು. ಗಿರೀಶನು, "ಶ್ !! ನಿದ್ದೆಮಾಡ್ತಿರೋರು ಮಾತಾಡೊಲ್ಲ" ಎಂದ. ಶಶಿಗೆ ನಗು ಬಂತು.

ಕುರ್ದುವಾಡಿಯನ್ನು ರೈಲು ಬೆಳಗಿನಜಾವ ೩-೩೦ಕ್ಕೆ ಬಿಟ್ಟಿತು ; ಸ್ಟೇಷನ್ನು ದೂರವಾದಮೇಲೆ ಇಬ್ಬರಲ್ಲಿ ಯಾರೊಬ್ಬರೂ ಎದ್ದು ದೀಪ ಹಚ್ಚಿಕೊಂಡು ಕೂಡುವ ಪ್ರಯತ್ನಮಾಡಲಿಲ್ಲ. ಗಿರೀಶನು ಮಲಗಿ

ಕೊಂಡೇ ಮಾತಿಗಾರಂಭಿಸಿ, ಶಶಿಯ ಪೂರ್ಣ ಪರಿಚಯ ಪಡೆಯಲಿಚ್ಛಿಸಿ ದನು. ಶಶಿಯು ತನ್ನ ತಂದೆತಾಯಿಗಳು ಯಾರೆಂಬುದನ್ನೂ ತನ್ನ ಬಂಧುಗಳೆಲ್ಲೆಲ್ಲಿದ್ದಾರೆಂಬುದನ್ನೂ, ಹೇಳಿದಳು. ಮತ್ತು ತಾನು ಬಾಲವಿಧವೆಯೆಂದೂ, ಆದ್ದರಿಂದ ತನ್ನನ್ನು ತಂದೆಯು ಓದಿಗೆ ಹಾಕಿದ ರೆಂದೂ ಮತ್ತು ಅನಂತರ ತನಗೂ ದೇವರತ್ನನಿಗೂ ಹೇಗೆ ಸಂಬಂಧ ಬೆಳೆಯಿತೆಂದೂ, ತಾನು ಈ ಸಂಬಂಧದಿಂದ ತನ್ನವರಿಗೆ ತ್ಯಾಜ್ಯಳಾದು ದನ್ನೂ ಸೂಕ್ಷ್ಮವಾಗಿ ವಿವರಿಸಿದಳು. ಅವಳು ತನ್ನ ಕತೆಯನ್ನು ಆರಂಭಿಸಿದಾಗಲಿಂದ ಗಿರೀಶನು ಹೂಗುಟ್ಟುತ್ತಿದ್ದವನು ಕ್ರಮೇಣ ನಿಲ್ಲಿಸಿ ಬಿಟ್ಟನು. ಶಶಿಯು ತನ್ನ ಕತೆ ಮುಗಿಸಿ ಆತನ ಪರಿಚಯವನ್ನು ಕೋರಿದಳು. ಗಿರೀಶನಿಂದ ಉತ್ತರಬರಲಿಲ್ಲ. ಅವಳು ಕುತೂಹಲ ದಿಂದ ಎದ್ದು ದೀಪಹಚ್ಚಿ ನೋಡಿದಳು. ಗಿರೀಶನು ಸುಖವಾಗಿ ನಿದ್ರಿಸುತ್ತಿದ್ದನು. ಒಂದೆರಡು ನಿಮಿಷಗಳ ಕಾಲ ಅವನ ಮುಖವನ್ನೇ ನೋಡುತ್ತ ನಿಂತಳು. ಗಿರೀಶನು ಅಷ್ಟೇನೂ ಸುರೂಪಿಯಲ್ಲದಿದ್ದರೂ ಮಲಗಿ ನಿದ್ರಿಸುತ್ತಿದ್ದಾಗ ಶಶಿಯು ಅವನನ್ನು ನೋಡುವುದರಲ್ಲಿ ಅದೇನೋ ಒಂದುಬಗೆಯ ಆನಂದ ಪಡೆದಳು. ಗಿರೀಶನು ಆಗವಳಿಗೆ ಸುಗುಣಸುಂದರನಾಗಿ ಕಂಡನು. ಅವನ ಮೇಲುಹೊದಿಕೆಯು ಕಾಲ ಕೆಳಗೇ ಬಿದ್ದಿತ್ತು. ಕಿರುನಗೆಯಿಂದ ಶಶಿಯು ಅವನಿಗೆ ಶಾಲನ್ನು ಹೊಚ್ಚಿ, ದೀಪವಾರಿಸಿ ತನ್ನ ಪಾಡಿಗೆ ತಾನು ಮಲಗಿದಳು.

ಗಿರೀಶನಿಗೆಚ್ಚರವಾದಾಗ ಬೆಳಿಗ್ಗೆ ೬ ಘಂಟೆಯಾಗಿತ್ತು. ಎಚ್ಚರ ವಾದೊಡನೆ ಶಶಿಯು ಮಲಗಿದ್ದ ಬರ್ತಿನಕಡೆ ತಲೆ ಹೊರಳಿಸಿ ನೋಡಿದ. ಶಶಿಯು ಇನ್ನೂ ನಿದ್ರಿಸುತ್ತಲೇ ಇದ್ದಳು. ಒಂದು ಹತ್ತು ನಿಮಿಷ ಗಿರೀಶನು ಯೋಚಿಸುತ್ತಾ ಹಾಗೆಯೇ ಮಲಗಿದ್ದ. ಅನಂತರ ತಟ್ಟನೆದ್ದು ಹೋಗಿ ಮುಖ ತೊಳೆದುಕೊಂಡು ಬಂದು, ಬಟ್ಟೆ ಬದಲಾಯಿಸಿಕೊಂಡು, ತನ್ನ ಹೋಲ್ಡಾಲನ್ನು ಕಟ್ಟಿಟ್ಟು, ಶಶಿಯನ್ನೆ ಚ್ಚರಗೊಳಿಸಿದನು. ಶಶಿಯು ನಿಧಾನವಾಗೆಚ್ಚತ್ತು ಅವನ ಮುಖ

ನೋಡಿ ಮುಗುಳ್ನಗೆ ಬೀರಿದಳು. ಗಿರೀಶನು, "ಏಳು! ಏಳು! ಆರೂವರೆಯಾಯಿತು. ಇನ್ನೇನು ಪೂನಾ ಸ್ಟೇಷನ್ನು ಬರುತ್ತೆ" ಎಂದ. ಶಶಿಯು ಅವನ ಮಾತನ್ನು ಕಿವಿಗೆ ಹಾಕಿಕೊಳ್ಳದೆ ಸಗುಮುಖಳಾಗಿ ಅವನ ಮುಖವನ್ನೇ ನೋಡುತ್ತಾ ಮಲಗಿದ್ದಳು. "ನನ್ನ ಮುಖ ನೋಡ್ತಾ ಮಲಗಿದ್ದರೆ ಏನು ಹೊಟ್ಟೆ ತುಂಬೀತು? ಬೇಗ ಎದ್ದು ಮುಖ ತೊಳೆದುಕೊಂಡು ಬಂದರೆ ಪೂನಾ ಸ್ಟೇಷನ್ನಿನಲ್ಲಿ ಬ್ರೆಡ್ಡು-ಕಾಫೀಯಿಂದಲಾದರೂ ಹೊಟ್ಟೆ ತುಂಬಿಸಿಕೋಬಹುದು" ಎಂದು ಗಿರೀಶನೂ ನಸುನಗುತ್ತ ನುಡಿದ. ಶಶಿಯು ಮೆಲ್ಲನೊಮ್ಮೆ ಆಕಳಿಸಿ ಮೈಮುರಿದು ಎದ್ದು ತನ್ನ ಸಲಕರಣೆಗಳನ್ನೊದಗಿಸಿಕೊಂಡು ಮುಖ ತೊಳೆದುಕೊಳ್ಳಲು ಹೋದಳು. ೬-೩೫ ಕ್ಕೆ ಸರಿಯಾಗಿ ರೈಲುಗಾಡಿಯು ಪೂನಾ ಸ್ಟೇಷನ್ನಿನಲ್ಲಿ ಹೋಗಿ ನಿಂತಿತು.

ಗಿರೀಶನು ಕೂಡಲೆ ಗಾಡಿಯಿಂದ ಇಳಿದು ಹೋಗಿ ತನ್ನ ಗೆಳೆಯನಿಗೆ ಒಂದು ತಂತಿಕೊಟ್ಟು ಹಿಂತಿರುಗುತ್ತ, ಜೊತೆಯಲ್ಲೇ 'ರಿಫ್ರೆಷ್‌ಮೆಂಟ್ ಕಾರಿ'ನಿಂದ ಉಪಹಾರ ತೆಗೆಸಿಕೊಂಡು ಬಂದ. ಶಶಿಯು ಆ ವೇಳೆಗೆ ಮುಖವನ್ನು ತೊಳೆದುಕೊಂಡಾಗಿತ್ತು. ಕನ್ನಡಿಯ ಮುಂದೆ ನಿಂತು ತಲೆಗೂದಲನ್ನು ಬಾಚಿಕೊಂಡು ಗಂಟು ಹಾಕಿಕೊಳ್ಳುತ್ತಿದ್ದಳು. ಆಳು ಕಾಫಿ-ಬ್ರೆಡ್ಡುಗಳ ತಟ್ಟೆಯನ್ನು ಒಳಗಿಟ್ಟು ಹೋದ. ಶಶಿಯೂ-ಗಿರೀಶನೂ ಸೇರಿಕೊಂಡು ತರಲ್ಪಟ್ಟಿದ್ದ ರೊಟ್ಟಿ-ಕಾಫಿಗಳನ್ನು ಸ್ವಲ್ಪವೂ ಉಳಿಸದೆ ಮುಗಿಸಿಬಟ್ಟರು. ಶಶಿಯೂ ತನ್ನ ಹಾಸಿಗೆಯನ್ನು ಸುತ್ತಿಟ್ಟು ಕುಳಿತಳು.

ಪೂನಾದಿಂದ ಆಚೆಗೆ ಒಂದೆರಡು ಸ್ಟೇಷರ್ನ ಕಳೆಯುವವರೆಗೆ ಗಿರೀಶನು ವಿಚಾರಪರವಶನಾಗಿ ಕುಳಿತ್ತಿದ್ದ. ಶಶಿಯು ತನ್ನ ಸುತ್ತ ಮುತ್ತಲಿದ್ದ ಘಾಟ್ ಪ್ರದೇಶದ ಸೊಬಗನ್ನು ನೋಡುತ್ತಿದ್ದಳು. ಆ ಪ್ರಕೃತಿ ಸೌಂದರ್ಯದ ಸವಿಗಂಡಾದಮೇಲೆ ಒಮ್ಮೆ ಗಿರೀಶನ ಕಡೆ ನೋಡಿ "ಏನು ಯೋಚಿಸುತ್ತಿದ್ದೀರಿ?" ಎಂದು ಕೇಳಿದಳು. "ಏನೂ

ಇಲ್ಲ; ನೀನ್ಯಾರೋ-ನಾನ್ಯಾರೋ–ಹುಟ್ಟಿದಾಗಿನಿಂದ ಕಾಣದೇ ಇದ್ದ ಒಬ್ಬ ಹೆಂಗಸಿಗೋಸ್ಕರ ನಾನ್ಯಾಕೆ ನನ್ನ ತಲೇಮೇಲೆ ಇಲ್ಲದ ಭಾರಾ ಹೊತ್ಕೋಬೇಕೂಂತ ಯೋಚ್ನೆ ಮಾಡ್ತಿದ್ದೇನೆ" ಎಂದ ಗಿರೀಶ.

"ಕೊನೇಗೇನು ನಿರ್ಧಾರಕ್ಕೆ ಬಂದಿರಿ ?"

"ಇಷ್ಟೆ. ಪ್ರಪಂಚದಲ್ಲಿ ನಿನ್ನಹಾಗೆ ಕೋಟ್ಯಾಂತರ ಹೆಂಗುಸರು ಕಷ್ಟಕ್ಕೆ ಸಿಕ್ಕಿಕೊಂಡಿರ್ತಾರೆ. ಅವರಿಗೆಲ್ಲ ಯಾರು ಸಹಾಯಮಾಡಿದ್ದಾರೆ? ಒಂದೇ ರೈಲಿನಲ್ಲಿ ಪ್ರಯಾಣಮಾಡೋರು ಊರುತಲಪುತ್ತಲೇ ಒಬ್ಬರಿಂದೊಬ್ಬರು ಬೀಳ್ಕೊಳ್ಳೋದು ಕೂಡ ಇಲ್ಲದೆ ತಂತಮ್ಮ ದಾರಿ ಹಿಡಿದು ಹೋಗೊಲ್ವೆ? ಹಾಗೇನೇ ನೀನೂ ನಾನೂ ರೈಲಿನಲ್ಲಿ ಭೇಟಿಯಾದೆವು; ಯಾಕೆ ನಾವೂ ಉಳಿದೋರ ಹಾಗೆ ನಂನಮ್ಮ ದಾರಿಹಿಡಿದು ಹೋಗಬಾರದೂಂತ ನನಗನ್ನಿಸ್ತಿದೆ."

"ನೀವಿಷ್ಟು ಹೇಡಿಗಳೂಂತ ನಾನು ಭಾವಿಸಿರಲಿಲ್ಲ. ಹೋಗಲಿ! ನನ್ನಿಂದ ನಿಮಗ್ಯಾಕಿಷ್ಟು ತೊಂದರೆ; ನನ್ನ ಸ್ವಸ್ಥವಾಗಿ ಯಾವುದಾದರೊಂದು ಆಶ್ರಮಕ್ಕೆ ಸೇರಿಸ್ಬಿಟ್ಟು ಹೋದರೆ ಸಾಕು. ಇಲ್ಲಾ ಅದೂ ಕಷ್ಟವಾದರೆ ಬೇಡ. ನನ್ನ ಪಾಡು ಹೇಗಾದರೂ ಆಗುತ್ತೆ ಬಿಡಿ."

"ಸರಿ, ಹಾಗಾದ್ರೆ! ಬೊಂಬಾಯಿ ತಲಪುತ್ತಲೇ ನಿನ್ನನ್ನ ಯಾವುದಾದ್ರೊಂದು ಆಶ್ರಮಕ್ಕೆ ಕರೆದುಕೊಂಡು ಸೇರಿಸಿಬಿಟ್ಟು ನನ್ನ ದಾರಿ ಹಿಡೀತೇನೆ."

"ಬಹಳ ಸಂತೋಷ. ಅಷ್ಟಾದರೂ ಮಾಡ್ತೀನೀಂತ ಹೇಳಿದಿರಲ್ಲಾ." ಎಂದು ನುಡಿದು ಶಶಿಯು ಖಿನ್ನ ಮನಸ್ಕಳಾದಳು. ಕಲ್ಯಾಣ್, ದಾದರ್ ಸ್ಟೇಷನ್ನುಗಳು ಕಳೆದು ಬೊಂಬಾಯಿಯ ವಿಕ್ಟೋರಿಯಾ ಟರ್ಮಿನಸ್ಸಿಗೆ ಹತ್ತೂಕಾಲು ಘಂಟೆಗೆ ಸರಿಯಾಗಿ ಗಾಡಿ ಬಂದಿತು. ಕೂಲಿಗಳು ಬಂದು ಮುತ್ತಿದರು.

ಗಿರೀಶನು ಅದುವರೆಗೆ ಯೋಚನೆಯಲ್ಲಿ ಮೈಮರೆತು ಕುಳಿತಿದ್ದವನು ಆಗ ಎಚ್ಚತ್ತು ಶಶಿಯ ಕಡೆ ತಿರುಗಿ ನೋಡಿದ. ಶಶಿಯು ಮತ್ತೆ ಅತ್ತು ಅತ್ತು ಕಣ್ಣುಗಳನ್ನು ಕೆಂಪಗೆಮಾಡಿಕೊಂಡಿದ್ದುದನ್ನು ಕಂಡರೂ, ಕಾಣದವನಂತೆ ಅವಳನ್ನೆಬ್ಬಿಸಿ ಹೊರಕ್ಕೆ ಕರೆತಂದ. ಕೂಲಿಯವರು ಇಬ್ಬರ ಸಾಮಾನುಗಳನ್ನೂ ಒಂದು ಟ್ಯಾಕ್ಸಿಗೆ ಸೇರಿಸಿದ ಮೇಲೆ ಶಶಿಯೊಡನೆ ಅದರಲ್ಲಿ ಕುಳಿತು, ಟ್ಯಾಕ್ಸಿ ಡ್ರೈವರಿಗೆ ಗ್ವಾಲಿಯಾ ಟ್ಯಾಂಕ್‌ರೋಡಿಗೆ ಹೋಗುವಂತೆ ತಿಳಿಸಿದ. ಅವನ ಮಾತಿನಲ್ಲಿ ಒಂದು ಬಗೆಯ ಬದಲಾವಣೆಯಾಯಿತು. ಶಶಿಗೆ ಬೊಂಬಾಯಿನ ರಸ್ತೆಗಳು, ಭಾರಿ ಕಟ್ಟಡಗಳ ಪರಿಚಯವನ್ನು ಮಾಡಿಕೊಡುತ್ತ ಅವಳನ್ನು ಹರ್ಷಚಿತ್ತಳನ್ನಾಗಿ ಮಾಡಲು ತನ್ನ ಬುದ್ಧಿ ಶಕ್ತಿಯನ್ನೆಲ್ಲ ವೆಚ್ಚಮಾಡತೊಡಗಿದ. ಅದನ್ನು ಕಂಡು ಶಶಿಯು,

"ಏನು ಒಂದು ಘಳಿಗೇಲಿದ್ದಾಗ ನೀವು ಇನ್ನೊಂದು ಘಳಿಗೇಲಿರೊಲ್ಲ. ಇದ್ದಕ್ಕಿದ್ದಹಾಗೇ ಬದಲಾಗಿಬಿಟ್ಟಿದ್ದೀರಿ?" ಎಂದು ನಿರಾಸಕ್ತಳಾಗಿ, ಅರ್ಥರಹಿತ ಹುಸಿ ನಗುವಿನೊಡನೆ ಕೇಳಿದಳು.

"ಬೊಂಬಾಯಿ ನನಗೆ ಸ್ವಂತ ಮನೆಯಿದ್ದಹಾಗಿದೆ. ಇಲ್ಲಿದ್ದಾಗ ನಾನು ಗೆಲುವಾಗೇ ಇರ್ತೇನೆ." ಎಂದ ಗಿರೀಶ.

"ಈಗ ನನ್ನೆಲ್ಲಿಗೆ ಕರಕೊಂಡು ಹೋಗ್ತಿದ್ದೀರಿ?"

"ಒಂದಾಶ್ರಮಕ್ಕೆ. ಅಲ್ಲಿ ನನಗೆ ಗುರ್ತಿರೋರೇ ಇದ್ದಾರೆ. ಅವರು ನಿನ್ನ ಚೆನ್ನಾಗೂ ನೋಡಿಕೊಳ್ತಾರೆ."

"ನೀವಿರೋದೆಲ್ಲಿ?"

"ನಾನು ಇನ್ನೊಂದು ಮೂಲೇಲಿದೇನೆ."

"ಯಾಕೆ, ಹೇಳಬಾರದೇನು?"

"ಹೇಳಿಬಿಡ್ತೀನಿ ನೀನು ಹುಡುಕ್ಕೊಂಡು ಬಂದುಬಿಡು."

"ಏನೂ ಭಯಪಡಬೇಡಿ ನಿಮ್ಮ ಹಿಂದೇನೂ ಓಡಿಬರೊಲ್ಲ."

"ಅದಿರಲಿ! ಶಶಿ! ಇಲ್ನೋಡು ನಾನೀಗ ನಿನ್ನ ಕರ್ಕೊಂಡು ಹೋಗೋಕಡೆ ನನಗೆ ಬೇಕಾದ ಸ್ನೇಹಿತರು ಬಹಳಜನ ಇದ್ದಾರೆ. ಅಲ್ಲಿ ನನ್ನ ಮಾನಕ್ಕೆ ಗೌರವಕ್ಕೆ ಏನಾದ್ರೂ ಸಂಚಕಾರ ಬರೋಹಾಗೆ ನೀನು ಒಂದು ಸ್ವಲ್ಪ ಏನಾದರೂ ಹೆಚ್ಚುಕಡಿಮೆ ನಡಕೊಂಡರೆ ಅಲ್ಲಿಗೆ ನನ್ನಗತಿ ಮುಗೀತು. ತಿಳೀತೇ? ನಾನು ಅಲ್ಲಿರೋ ಒಬ್ಬಿಬ್ಬರು ನನ್ನ ಸ್ನೇಹಿತರ ಹೆಂಡತಿಯರಿಗೆ ನಿನ್ನ ಪರಿಚಯಮಾಡಿಕೊಡುತ್ತೇನೆ. ಅವರಿಗೆ ನಿನ್ನ ಬಗ್ಗೆ ಏನೊಂದೂ ಅನುಮಾನ ಬರದಹಾಗೆ ನೀನು ನಡಕೋಬೇಕು."

"ಆಗಲಿ!"

"ನಿನಗೆ ಹಿಂದಿ, ಮರಾಠಿ ಯಾವುದಾದ್ರೂ ಭಾಷೆ ಮಾತಾಡೋಕೆ ಬರುತ್ತೋ?"

"ಇಲ್ಲ. ಹಿಂದಿ ಮಾತನಾಡಿದರೆ ಅರ್ಥವಾಗುತ್ತೆ. ಓದಬಲ್ಲೆ. ಆದರೆ ತಪ್ಪು ತಪ್ಪಾಗಿ ಮಾತಾಡೋಕೆ ಹೋಗೊಲ್ಲ."

"ಸರಿ ಬಿಡು; ಅದೊಂದು ರೀತೀಲಿ ಈಗ ಒಳ್ಳೇದೇ ಆಯಿತು. ನನ್ನ ಸ್ನೇಹಿತರು ಒಂದುವೇಳೆ ಇಂಗ್ಲೀಷಿನಲ್ಲಿ ಮಾತನಾಡಿಸಿದರೆ ಜವಾಬೇ ಕೊಡಬೇಡ. ಸುಮ್ಮನೆ ನನ್ನ ಮುಖ ನೋಡು. ನಾನವರಿಗೆ ಏನು ಹೇಳಬೇಕೋ ಹೇಳ್ತಿನಿ. ನಾನು ಹೇಳಿದ್ದಕ್ಕೆ ಸರಿಯಾಗಿ ನೀನು ನಟನೆ ಮಾಡಬೇಕು. ನೀನೇನಾದರೂ ಕೇಳಬೇಕಾದ್ದಿದ್ದರೆ ಆ ಮೇಲೆ ನಾವಿಬ್ಬರೇ ಇದ್ದಾಗ ಕೇಳು."

ಇಷ್ಟು ಹೇಳಿ ಗಿರೀಶನು, ಅವಳಿಗೆ ಮತ್ತೆ ರಸ್ತೆಗಳಲ್ಲಿ ಅದೂ ಇದೂ ತೋರಿಸುತ್ತ ಹಾಸ್ಯಕರವಾಗಿ ಏನಾದರೂ ಅಂದು ಅವಳನ್ನು ನಗಿಸುತ್ತ ಹೊರಟ. ಹರಿನಿವಾಸ್ ಬಿಲ್ಡಿಂಗ್ಸಿನ ಮುಂದೆ ಬರುತ್ತಲೂ ಟ್ಯಾಕ್ಸಿಯವನಿಗೆ ನಿಲ್ಲಲು ಹೇಳಿದ. ಕಟ್ಟಡದ ಹೆಬ್ಬಾಗಿಲಿನಲ್ಲಿ

ಇಬ್ಬರು 'ರಾಮಾ'ಗಳು ಕಾದಿದ್ದರು. ಕಾರು ನಿಲ್ಲುತ್ತಲೇ ಓಡಿಬಂದು ಗಿರೀಶನಿಗೆ ಸಲಾಂ ಹಾಕಿ ಅವನ ಕ್ಷೇಮಸಮಾಚಾರ ಕೇಳುತ್ತ ಕಾರಿನ ಬಾಗಿಲನ್ನು ತೆಗೆದು ನಿಂತರು. ಗಿರೀಶನು ಕಾರಿನಿಂದಿಳಿದು ಶಶಿಯನ್ನಿಳಿಸಿಕೊಂಡು ಕಟ್ಟಡದೊಳಕ್ಕೆ ಕರೆದೊಯ್ದ. ಮಹಡಿಯ ಮೆಟ್ಟಲುಗಳನ್ನು ಹತ್ತುತ್ತಲಿದ್ದಾಗ ಪಿಸುಮಾತಿನಲ್ಲಿ, ''ಮೇಲೆ ಹೋದಮೇಲೆ ನಾನೇನೇಹೇಳಿದರೂ ಆಶ್ಚರ್ಯ ಪಡಬೇಡಾ, ಶಶಿ! ಅಲ್ಲದೆ ಮೊದಲೇ ನಾನು ಟ್ಯಾಕ್ಸಿಯಲ್ಲಿ ಹೇಳಿದ್ದನ್ನೆಲ್ಲಾ ಮರೆಯಲೂ ಬೇಡ.'' ಎಂದು ಅವಳನ್ನು ಎಚ್ಚರಿಸಿದ.

ನಾಲ್ಕನೆಯ ಮಹಡಿಯಲ್ಲಿ ಒಟ್ಟು ಆರು ಪುಟ್ಟ ಸಂಸಾರಗಳಿಗೆ ಆಗುವಷ್ಟು ವಾಸದ ಭಾಗಗಳಿದ್ದವು ಅಲ್ಲಿ ಮೂರು ಭಾಗಗಳಲ್ಲಿ ಗಿರೀಶನ ಮಿತ್ರರೇ ಸಂಸಾರಸಮೇತ ವಾಸಿಸುತ್ತಿದ್ದರು. ಇನ್ನೊಂದರಲ್ಲಿ ಗಿರೀಶನಿದ್ದ. ಉಳಿದೆರಡರಲ್ಲಿ ಇದ್ದವರು ಗಿರೀಶನಿಗೆ ಅಪರಿಚಯಸ್ಥರು. ಅಲ್ಲಿದ್ದ ಗಿರೀಶನ ಮೂರು ಮಿತ್ರರಪೈಕಿ ಪುರುಷೋತ್ತಮ್ ಎಂಬ ಒಬ್ಬಾತನು ಗಿರೀಶನ ಆಪ್ತಮಿತ್ರ. ಇವರಿಬ್ಬರೂ ಹೆಚ್ಚು ಕಡಿಮೆ ಅಣ್ಣ-ತಮ್ಮಂದಿರಂತಿದ್ದರು. ಪುರುಷೋತ್ತಮನ ಪತ್ನಿ ಉಮಾದೇವಿಯು ಗಿರೀಶನನ್ನು ತನ್ನ ಮನೆಯವನಂತೆಯೇ ಆದರದಿಂದ ಕಾಣುತ್ತಿದ್ದಳು. ಅವನು ಬೊಂಬಾಯಿಯಲ್ಲಿ ಏಕಾಂಗಿಯಾಗಿ ವಾಸಿಸುತ್ತಿದ್ದುದನ್ನು ಉಮಾದೇವಿಯು ಅನೇಕವೇಳೆ ಖಂಡಿಸಿ, ಅವನು ತನ್ನ ಹೆಂಡತಿಯನ್ನು ಕರೆತರಬೇಕೆಂದೂ, ಅವನು ಕಾಯಿಲೆ ಕಸಾಲೆಯಿಂದ ನರಳುತ್ತಿದ್ದರೆ ಅವನಿಗೆ ಉಪಚಾರ ಮಾಡುವವರ್‍ಯಾರೆಂದೂ, ಹಾಗೆ ಗಿರೀಶನು ಏಕಾಂತವಾಸಿಯಾಗಿ ಇಲ್ಲಿದ್ದರೆ ಅಲ್ಲಿ ಅವನ ಹೆಂಡತಿಗೆ ಹೇಗೆ ಮನಶ್ಶಾಂತಿ ಇದ್ದೀತೆಂದೂ ಆಗಾಗ್ಗೆ ಹೇಳುತ್ತಲೇ ಇದ್ದಳು. ಹೀಗೆ ಹೇಳುತ್ತಿದ್ದರೂ ತಾನೇ ಮಮತೆಯಿಂದ ಅವನ ಉಪಚಾರದ ಹೊರೆಯನ್ನೂ ಹೊತ್ತುಕೊಳ್ಳುತ್ತಿದ್ದಳು. ಉಮಾದೇವಿಯು ತನ್ನ ಹೆಂಡತಿಯ ಪ್ರಸ್ತಾಪವೆತ್ತಿದಾಗಲೆಲ್ಲ ಗಿರೀಶನು, ತಾನು ಅದುವರೆಗೆ

ತನ್ನ ಹೆಂಡತಿಯನ್ನು ಕರೆತರಲಾಗದ್ದಕ್ಕೆ ಏನಾದರೊಂದು ನೆವ ಹೇಳಿ, 'ಈಗ ಕರೆತರುತ್ತೇನೆ-ಆಗ ಕರೆತರುತ್ತೇನೆ' ಎಂದು ಸಮಾಧಾನ ನೀಡುತ್ತಿದ್ದ. ಇದರಿಂದ ಉಮಾದೇವಿಯು ತೃಪ್ತಳಾಗದಿದ್ದರೂ ಗಿರೀಶನಿಗೂ ಅವನ ಮಾವನ ಮನೆಯವರಿಗೂ ಏನೋ ಮನಸ್ತಾಪ ಬಂದಿರಬೇಕೆಂದೂ, ಆದರಿಂದಲೇ ಅವನು ತನ್ನ ಹೆಂಡತಿಯನ್ನಿದು ವರೆಗೂ ಕರೆತರಲಿಲ್ಲವೆಂದೂ ಭಾವಿಸಿಕೊಂಡಿದ್ದಳು.

ಇದು ಗಿರೀಶನು ಶಶಿಯೊಡನೆ ನಾಲ್ಕನೆಯ ಮಹಡಿಯನ್ನು ಸೇರುವ ವೇಳೆಗೆ ಅವನ ಮೂರು ಮಂದಿ ಮಿತ್ರರೂ ಪುರುಷೋತ್ತಮನ ಮನೆಯ ಬಾಗಿಲಲ್ಲಿ ಕುತೂಹಲದಿಂದ ಕಾದು ನಿಂತಿದ್ದರು. ಮೆಟ್ಟಲು ಗಳ ಮೇಲೆ ಇವರಿಬ್ಬರ ತಲೆಗಳೂ ಕಂಡೊಡನೆಯೇ "ಆಯಿ! ಆಯಿ!" ಎಂದು ಸಂತೋಷದಿಂದ ಕೂಗಿ ಗುಲ್ಲೆಬ್ಬಿಸಿಬಿಟ್ಟರು. ಪುರುಷೋತ್ತ ಮನ ಮನೆಯೊಳಗಿನಿಂದ ಉಮಾದೇವಿಯೂ, ಗಿರೀಶನ ಉಳಿದಿಬ್ಬರು ಮಿತ್ರರ ಪತ್ನಿಯರೂ ಸಡಗರದಿಂದ ಹೊರಕ್ಕೋಡಿ ಬಂದರು. ಉಮಾದೇವಿಯು ಕೈಯಲ್ಲಿ ಆರತಿ ತಟ್ಟೆಯನ್ನು ಹಿಡಿದಿದ್ದಳು. ಎಲ್ಲರ ಮುಖದಲ್ಲೂ ಹರ್ಷದ ಚಿನ್ಹೆಯು ಮೂಡಿತ್ತು.

ಶಶಿಯು ಇದನ್ನು ಕಂಡು "ಇವರ್ಯಾಕೆ ಹೀಗೆ ನಿಂತಿದ್ದಾರೆ?" ಎಂದು ಗಿರೀಶನನ್ನು ಕೇಳಿದಳು. ಗಿರೀಶನು, "ನನಗೂ ಗೊತ್ತಿಲ್ಲ. ಸುಮ್ಮನೆ ಬಂದು ಬಿಡು. ನಾನ್ಹೇಳಿದ್ದು ಜ್ಞಾಪಕವಿರಲಿ. ಅವರೇನೇನು ಹೇಳಿದರೆ ಅದನ್ನ ಪ್ರತಿ ಮಾತಾಡದೆ ಮಾಡಿಬಿಡು; ನಾನಿದ್ದೇನೆ" ಎಂದು ಅವಳ ತೋಳನ್ನು ಹಿಡಿದುಕೊಂಡು ಮುಂದೆ ಹೋಗಿ ತನ್ನ ಮಿತ್ರರನ್ನು ಕುರಿತು "ಹಲೊ ಬಾಯ್ಸ್! ಏನು ಇವತ್ತು ಎಲ್ಲರೂ ಆಫೀಸುಗಳಿಗೆ ಚಕ್ಕರ್ ಹಾಕಿದ್ಹಾಗಿದೆ" ಎಂದು ನಸುನಗುತ್ತ ನುಡಿದು ಉಮಾದೇವಿಯ ಕಡೆ ತಿರುಗಿ, "ಏ ಸಬ್ ಕ್ಯಾ ಹೈ ಭಾಬಿ?" ಎಂದು ಕೇಳಿದ.

"ವಾಹ್! ಇಷ್ಟು ದಿನಕ್ಕೆ ನೀನು ಭಾಬೀನ ಮನೇಗೆ ಕರ್ಕೊಂಡು ಬಂದಿದ್ದೀ. ಈ ಹೊತ್ತು ಹಬ್ಬಾ ಮಾಡದೇ ಆಫೀಸ್ನಲ್ಲಿ ಕೂತು ಅಂಕಿಗಳನ್ನು ಕೂಡ್ತಾ ಕೂತ್ಕೋಬೇಕೇನು, ಭಾಬೀ ಹೇಗಿದ್ದಾಳೋ ನೋಡೋಣಾಂತ ಕಾದಿದ್ದೀವಿ" ಎಂದವನ ಮಿತ್ರರು ಏಕಕಂಠದಿಂದ ನುಡಿದರು.

"ತುಮ್ ಕ್ಯಾಜಾನೋಗೆ ಭೈಯಾ!....ತುಮ್ ದೋನೋ ಹ್ಯಾ ಖಡೋ" ಎಂದು ಉಮಾದೇವಿಯು ಗಿರೀಶ-ಶಶಿಯರನ್ನು ಬಾಗಿಲಿಗೆದುರಾಗಿ ನಿಲ್ಲಿಸಿ, ಅವರ ಹಣೆಗಳಿಗೆ ತಿಲಕ ಹಚ್ಚಿ ತನ್ನ ಗೆಳತಿಯರೊಂದಿಗೆ ಹಾಡು ಹೇಳಿಕೊಂಡು ಆರತಿ ಎತ್ತಿದಳು. ಶಶಿಗೆ ಇವರಾಡುತ್ತಿದ್ದ ಹಿಂದೀ ಮಾತು ಅರ್ಥವಾಯಿತು; ಆದರೆ ಆಶ್ಚರ್ಯವೂ ಆಯಿತು. ಅಲ್ಲಿ ತನ್ನೆದುರಿಗೆ ನೆರೆದಿದ್ದವರ ಮುಖಗಳನ್ನೆಲ್ಲ ಒಮ್ಮೆ ನೋಡಿದಳು. ಅನಂತರ ಗಿರೀಶನ ಮುಖ ನೋಡಿದಳು. ಗಿರೀಶನು ಅವಳ ಕಡೆಯೇ ನೋಡುತ್ತಿದ್ದವನು ಸಗುಮುಖದಿಂದ ಉಮಾದೇವಿಯ ಆರತಿ ತಟ್ಟೆಯ ಕಡೆ ನೋಡಲಾರಂಭಿಸಿದ. ಶಶಿಯು ಈ ಸ್ವಾಗತಕ್ಕೆ ಕಾರಣವೇನೆಂಬುದನ್ನು ಕುರಿತು ಒಳಗೇ ಯೋಚಿಸಲಾರಂಭಿಸಿದಳು. ಉಮಾದೇವಿಯು ಅವರಿಬ್ಬರನ್ನೂ ಒಳಗೆ ಬರಹೇಳಿ, ಮೊದಲು ದೇವರಿಗೆ ನಮಸ್ಕಾರ ಹಾಕಬೇಕೆಂದೂ, ಶಶಿಯು ಬಾಗಿಲಲ್ಲಿದ್ದ ಅಕ್ಕಿಯ ಬಟ್ಟಲನ್ನು ಒದ್ದುಕೊಂಡು ಬರಬೇಕೆಂದೂ ತಿಳಿಸಿದಳು. ಗಿರೀಶನು ಶಶಿಯನ್ನು ದೇವರ ಮಂದಾಸನದೆದುರಿಗೆ ಹೆಚ್ಚುಕಡಿಮೆ ಎಳೆದುಕೊಂಡೇ ಹೋಗಿ ನಿಲ್ಲಿಸಿದನೆನ್ನಬಹುದು. ಶಶಿಯೂ ಯಂತ್ರದಂತೆ ಗಿರೀಶನೊಡನೆ ದೇವರಿಗೆ ನಮಸ್ಕರಿಸಿದಳು. ನಮಸ್ಕರಿಸುವಾಗ ಮಂದಾಸನದೆದುರಿನಲ್ಲಿ ಬಣ್ಣ ಬಣ್ಣದ ರಂಗವಲ್ಲಿ ಹಾಕಿ ಅದರಮಧ್ಯೆ ಬಾದಾಮಿ, ಖರ್ಜೂರ ದ್ರಾಕ್ಷಿಗಳ ಕುಪ್ಪೆಯನ್ನಿಡಲಾಗಿದ್ದುದನ್ನು ಕಂಡಳು. ದೇವರ ವಿಗ್ರಹದ ಎದುರಿನಲ್ಲಿ ಕುಳಿತು ಹಿಂದೊಮ್ಮೆ ಎಂದೋ ಒಂದು ಪ್ರಾರ್ಥನೆ ಮಾಡಿಕೊಂಡಿದ್ದಳು. ಆಗ ಆರೀತಿ ಪ್ರಾರ್ಥಿಸ

ಬೇಕೆಂದು ಅವಳ ತಾಯಿ ಹೇಳಿಕೊಟ್ಟಿದ್ದರು. ಇಂದು ಅದೇ ಪ್ರಾರ್ಥನೆ ಅವಳ ಹೃದಯದಿಂದ ತಾನಾಗಿ ಹೊರಟಿತು. ಶಶಿಯು ಭಕ್ತಿಯಿಂದ ದೇವರಿಗೆ ನಮಸ್ಕರಿಸಿ ಪ್ರಾರ್ಥಿಸುತ್ತ ಕುಳಿತಿದ್ದುದನ್ನು ಕಂಡು ಉಮಾದೇವಿಯು, "ಎಷ್ಟು ಚೆನ್ನಾಗಿ ಲಕ್ಷಣವಾಗಿದ್ದಾಳೆ; ದೇವರಲ್ಲೂ ಎಷ್ಟು ಭಕ್ತಿ ಇಟ್ಟಿದಾಳೆ" ಎಂದು ತನ್ನ ಗೆಳತಿಯರೊಂದಿಗೆ ನುಡಿದಳು. ಶಶಿಯು ಪ್ರಾರ್ಥನೆ ಮುಗಿಸಿಕೊಂಡೆದ್ದು, ಏನುಮಾಡ ಬೇಕೆಂಬುದು ತೋಚದೆ ಉಮಾದೇವಿಯ ಮುಖವನ್ನೊಮ್ಮೆ ನೋಡಿ ನಸುನಕ್ಕು ನಿಂತಳು. ಉಮಾದೇವಿಯು, "ಅಬ್ ಜಾಕರ್ ಥೋಡಿ, ದೇರ್ ಆರಾಮ್ ಕರೋ, ಬರ್ಹೆ! ಮೈ ಅಭಿ ಚಾಯ್ ಬನಾಕರ್ ಲಾತೀಹೂಂ!" ಎಂದವಳಿಗೆ ಹೇಳಿ, ಗಿರೀಶನನ್ನುದ್ದೇಶಿಸಿ, "ಮೈ ಆಜ್ ಬಹುತ್ ಸುಖೀಹುಂ! ಮೇರೀ ಏಕ್ ಬರ್ಹೆ ಮುಝೆ ಮಿಲ್ಗಯಿ! ತುಂ ಜೀತೇರಹೋ ಭೈಯಾ!" ಎಂದು ಟೀ ತಯಾರಿಸಲು ಹೊರಟಳು. ಬಾಗಿಲಲ್ಲೇ ನಿಂತಿದ್ದ ಗಿರೀಶನ ಮಿತ್ರರಿಬ್ಬರೂ "ಗಿರೀಶನು ಕಳುಹಿಸಿದ ತಂತಿ ನಾವು ಕಛೇರಿಗೆ ಹೊರಡುವುದರಲ್ಲಿದ್ದಾಗಲೇ ಬಂದದ್ದಕ್ಕೆ ಸರಿಹೋಯಿತು; ಇಲ್ಲದಿದ್ದರೆ ನಮಗೆ ಭಾಬೀನ ಸ್ವಾಗತಿಸೋ ಸುಯೋಗಾನೂ ತಪ್ಪುತ್ತಿತ್ತು, ಜೊತೆಗೆ ಉಮಾ ಭಾಬಿ ಮಾಡ್ತಿದ್ದ ಲಡ್ಡೂ ಊಟಕ್ಕೂ ಸೊನ್ನೆ ಬೀಳ್ತಿತ್ತು" ಎಂದು ಕೂಗಿದರು. ಉಮಾ ಭಾಬಿ "ಅದೇಕೆ? ಮಾಡಿದ ಲಡ್ಡು ನಿಮಗೆ ಸಂಜೆಯಾದರೂ ಸಿಕ್ತಿರಲಿಲ್ಲವೇನು?" ಎಂದು ಅಡಿಗೆಯ ಮನೆಯಿಂದಲೇ ಉತ್ತರಕೊಟ್ಟಳು. ಗಿರೀಶನು ಮೊದಲು ಶಶಿಗೆ ತನ್ನ ಮಿತ್ರರ ಪತ್ನಿಯರ ಪರಿಚಯವನ್ನೂ ಅನಂತರ ಮಿತ್ರರ ಪರಿಚಯವನ್ನೂ ಮಾಡಿಕೊಟ್ಟ. ಆಮೇಲೆ ತನ್ನ ವಾಸದ ಭಾಗಕ್ಕೆ ಶಶಿಯನ್ನು ಕರೆದೊಯ್ದು. ಆವೇಳೆಗೆ ಪುರುಷೋತ್ತಮನು ಟ್ಯಾಕ್ಸಿಯವನಿಗೆ ದುಡ್ಡುಕೊಟ್ಟು ಕಳುಹಿಸೀ ಸಾಮಾನುಗಳನ್ನು ಒಳಗಿಡಿಸುತ್ತಿದ್ದ. ಗಿರೀಶನೂ ಶಶಿಯೂ ಬಂದದ್ದನ್ನು ಕಂಡು, ನಸುನಗುತ್ತ "ಏನು ಗಿರೀಶ್ ಭೈಯಾ! ನಮ್ಮ

ಭಾಬಿ ಇಷ್ಟು ಸುಂದರವಾಗಿದ್ದಾಳೆ. ನೀನು 'ನನ್ನ ಹೆಂಡತಿ ಹಾಗಿದ್ದಾಳೆ ಹೀಗಿದ್ದಾಳೆ' ಅಂತ ದೂರ್ತಾ ಇದ್ದೆ ?" ಎಂದು ಕೇಳಿದನು.

ಗಿರೀಶನು ಉತ್ತರಕೊಡದೆ ಶಶಿಗೆ ಪುರುಷೋತ್ತಮನ ಪರಿಚಯ ಮಾಡಿಕೊಡುತ್ತ, "ಇವನೇನಾದರೂ ಆಗಾಗ ನನ್ನ ಮೇಲೆ ದೂರು ಗಳನ್ನು ಹೇಳ್ತಾ ಇರ್ತಾನೆ. ಅವಕ್ಕೆಲ್ಲಾ ಕಿವಿಗೊಡಬೇಡ." ಎಂದು ನಗುನಗುತ್ತ ಇಂಗ್ಲೀಷಿನಲ್ಲಿ ಶಶಿಗೆ ಹೇಳಿದ. ಪುರುಷೋತ್ತಮನು, "ಓಹೋ! ಭಾಬಿ ಇಂಗ್ಲಿಷ್ ಓದಿದ್ದಾಳೆ; ಉಮೆಗೆ ಹೇಳಬೇಕು." ಎಂದು ನೆವಮಾಡಿಕೊಂಡು ಶಶಿಗೆ ವಂದಿಸಿ ಅವರಿಬ್ಬರನ್ನೂ ಬಿಟ್ಟು ಬಾಗಿಲನ್ನು ಮುಚ್ಚಿಕೊಂಡು ಹೋದ.

ಶಶಿಯು ತನ್ನ ಸುತ್ತಲೂ ಇದ್ದ ವಸ್ತುಗಳಮೇಲೆಲ್ಲ ಒಮ್ಮೆ ದೃಷ್ಟಿಬೀರಿ, ಅನಂತರ ಗಿರೀಶನ ಮುಖವನ್ನೊಂದು ಕ್ಷಣ ನೋಡುತ್ತ ನಿಂತಳು. ಗಿರೀಶನ ಮನಸ್ಸು ಅಸ್ವಸ್ಥತೆಗೀಡಾಯಿತು. ಅರ್ಥರಹಿತನಗೆ ಬೀರುತ್ತ ಶಶಿಯ ದೃಷ್ಟಿಯನ್ನೆದುರಿಸಿದ. ಶಶಿಯು ಕಿರುನಗೆಯಿಂದ,

"ನನ್ನ ಹೊಸ ಮನೆ ನನ್ನ ಮನಸ್ಸಿಗೆ ಪೂರಾ ಒಪ್ಪಿದೇಂತ ಕಾಣುತ್ತೆ" ಎಂದಳು. ಗಿರೀಶನಿಗೆ ತನ್ನ ಹಳೆಯ ಸ್ವಭಾವ ಸ್ವಲ್ಪ ಸ್ವಲ್ಪ ವಾಗಿ ತನ್ನ ಕೈ ಬಿಡುತ್ತ ಹೋಗುತ್ತಿರುವಂತೆ ಭಾಸವಾಯಿತು. ತಾನೇ ಕಟ್ಟಕಡೆಗೆ ಸೋಲುತ್ತಿರುವುದಾಗಿ ಭಾವಿಸಿದ. ಮನಸ್ಸು ಪ್ರತಿಭಟಿಸಿತು. ಹೃದಯವೇ ಗೆದ್ದರೂ, ಅದರ ಗೆಲುವನ್ನೊಪ್ಪಿಕೊಳ್ಳಲು ಮನವು ಏಕಾಏಕಿ ಸಿದ್ಧವಾಗಿರಲಿಲ್ಲ. ಗಿರೀಶನು ತನ್ನ ಹಳೆಯ ಸ್ವಭಾವವನ್ನು ಸಾಧಿಸಿಕೊಳ್ಳಲೆತ್ನಿಸಿ,

"ಓಹೊಹೊ! ಎಲ್ಲಾ ಮುಗೀತು - ಇನ್ನೇನೂ ಯೋಚನೆ ಇಲ್ಲಾಂತ ನಂಬಿ ಕೂತ್ಕೋಬೇಡ. ನಾನು ನಿನಗೆ ಯಾವುದಾದ್ರು ಆಶ್ರಮ ಗೀಶ್ರಮದಲ್ಲಿ ಜಾಗ ಹುಡುಕಿಕೊಂಡು ಬರೋವರೆಗೇ ನಿನಗಿಲ್ಲಿ ಜಾಗ" ಎಂದ.

“ಹಾಗಾದರೆ ನಾನೀಗಲೇ ಹೋಗಿ ಅವರಿಗೆಲ್ಲಾ, ನಾನು ‘ನಿಮ್ಮ ಹೆಂಡತಿ’ ಅಲ್ಲಾಂತ ಹೇಳಿಬಿಡ್ತೀನಿ. ಅವರೇನುಬೇಕಾದರೂ ತಿಳ್ಕೊಳ್ಳಲಿ. ನನಗೇನಾಗಬೇಕಾಗಿದೆ” ಎಂದು ಕೃತಕಕೋಪದಿಂದ ಕೂಡಿ ಶಶಿಯು ಬಾಗಿಲಕಡೆ ಹೊರಟಳು. ಗಿರೀಶನು ಗಾಬರಿಬಿದ್ದು, ಅವಳನ್ನು ತಡೆಯುತ್ತಾ “ಇದೇನೆ ನನಗೆ ನೀನು ಮಾಡೋ ಪ್ರತ್ಯುಪಕಾರ? ನಿನಗೆ ಏನೋ ಒಂದು ಆಶ್ರಯ ಒದಗಿಸೋಣಾಂತ ಪ್ರಯತ್ನಪಟ್ಟಿದ್ದಕ್ಕೆ ಈಗ ಸಾರ್ಥಕವಾಯ್ತು. ನೀನು ಹಾಗೆ ಮಾಡಿದರೆ ನನ್ನ ಗತಿ ...?” ಎಂದು ಅರೆ ದೈನ್ಯದಿಂದಲೂ, ಅರೆ ಕೋಪದಿಂದಲೂ ಮೆಲ್ಲನುಸುರಿದ.

“ಹಾಗಾದರೆ ಇನ್ನೊಂದು ಸಲ ಆ ಸರಣೀಲಿ ಮಾತ್ನಾಡಬೇಡಿ.”

“ಆಯ್ತು .... ಹಾಗೆ ಮಾತಾಡೊಲ್ಲ .... ತಪ್ಪಾಯ್ತು-ಮಹಾಪರಾಧವಾಯ್ತು-ಶತಾಪರಾಧವಾಯ್ತು .... ಏನು ಬೇಕಾದ್ರೂ ಇಟ್ಕೊ.” ಎಂದವಳ ಕಡೆ ತನ್ನ ಸೋಲನ್ನೊಪ್ಪಿಕೊಂಡವನಂತೆ ನೋಡುತ್ತ ಹಲ್ಲು ಕಿರಿದ. ಶಶಿಯು ಹಸನ್ಮುಖಿಯಾದಳು ಗಿರೀಶನು, ‘ ...‘ಯು ಸೀ’ ...ನಾನೆಷ್ಟೋಸಲ ಹೇಳೋದೇ ಒಂದು-ಆದರೆ ನನ್ನ ಭಾವನೆಯೇ ಒಂದು ..ಇದು ನನ್ನ ಸ್ವಭಾವವಾಗಿ ಹೋಗಿದೆ ...ಆದ್ರಿಂದ ನಾನ್ಯಾವಾಗಲಾದ್ರೂ ಏನಾದರೂ ಅಪ್ಪಿ ತಪ್ಪಿ ನಿನ್ನ ಮನಸ್ಸಿಗೆ ನೋವಾಗೋ ಹಾಗೆ ಮಾತಾಡಿದರೆ ಅದನ್ನ ಲಕ್ಷ್ಯಕ್ಕೆ ತಕೋಬೇಡಾ ಶಶಿ” ಎಂದ. ಇಷ್ಟು ಹೇಳೋಹೊತ್ತಿಗೆ ಅವನ ಮುಖವೆಲ್ಲಾ ನಾಚಿಕೆಯಿಂದ ಕೆಂಪೇರಿತು. ಅವನ ಮೂಗಿನ ತುದಿಯಲ್ಲಿ ಬೆವರಿನ ಬಿಂದುಗಳು ತಲೆದೋರಿದವು. ಅವನ ಆ ಅವಸ್ಥೆಯನ್ನು ನೋಡಿ ಶಶಿಗೆ ನಗುವು ತಡೆಯಲಾಗದಷ್ಟು ಒತ್ತಿಕೊಂಡು ಬಂದರೂ ಸಾಹಸಪಟ್ಟು ತಡೆದುಕೊಂಡಳು. ಅವನ ಮಿತ್ರರು ಹೇಳಿದ ತಂತಿ ಸುದ್ದಿಯ ವಿಚಾರವಾಗಿ ಅವನನ್ನು ಪ್ರಶ್ನಿಸಲು ಅವಳ ಮನಸ್ಸು ಆಗಿನಿಂದ ಕಾತರಗೊಂಡಿತ್ತು. ಈಗ ಸಂದರ್ಭ ಒದಗಿತೆಂದುಕೊಂಡು,

“ನಿಮ್ಮ ಸ್ನೇಹಿತರಿಗೆ ಏನಂತ ತಂತಿ ಕೊಟ್ಟಿದ್ದಿರಿ?” ಎಂದು ಕೇಳಿದಳು.

"ಏನೂ ಇಲ್ಲ ; ಸುಮ್ಮನೆ ನಾನು ಪೂನಾಯಿಂದ ಈ ಗಾಡೀಲಿ ಬರ್ತೀನೀಂತ ತಿಳಿಸಿದ್ದೆ ಅಷ್ಟೆ."

"ಅಷ್ಟೇನೆ? ನಿಮ್ಮ ಹೆಂಡತಿ ಬರ್ತಿದಾಳೆ ಜೊತೇಲೀಂತ ತಿಳಿಸಿರಲಿಲ್ವೆ ? "

ಗಿರೀಶನ ಮುಖವು ತೀರ ಕೆಂಪೇರಿತು. ಶಶಿಗೆ ಮುಖ ತೋರದೆ ಹೋಗಿ ಕುರ್ಚಿಯೊಂದರ ಮೇಲೆ ಕುಳಿತ.

"ನಾನು ಆಗಲೇ ಅದನ್ನ ಊಹಿಸಿದೆ ..ಆದರೆ ನನಗಾವಿಚಾರ ರೈಲಿನಲ್ಲೇ ಏಕೆ ಹೇಳಬಾರದಾಗಿತ್ತು ? ಸುಮ್ಮ ಸುಮ್ಮನೆ ನನ್ನ ಮನಸ್ಸು ಯಾಕೆ ನೋಯಿಸ್ಬೇಕಾಗಿತ್ತು ?"

"ಅಯಾಂ ಸಾರಿ '....ಹಾಗೆ ತಂತಿ ಕೊಟ್ಟಮೇಲೆ ಪುನಃ ನನ್ನ ಮನಸ್ಸು ಬದಲಾಯ್ತು....ಈ ತಾಪತ್ರಯಗಳೆಲ್ಲಾ ಏಕೆ ಅಂತನ್ನಿಸ್ತು ; ....' ಬಟ್ ಐ ಡಿಟ್ ಆನೆಸ್ಟ್ಲಿ ಮೀನಿಟ್ !....'"

"ಹೋಗಲೀ ಬಿಡಿ....ಇನ್ನು ಆ ಮಾತೇಕೆ?.... ಅದಿರಲಿ.... ನಿಮ್ಮ ವಿಚಾರಾನೇ ಏನೂ ನನಗೆ ಹೇಳೇ ಇಲ್ಲವಲ್ಲಾ....ಒಂದು ವೇಳೆ ಅವರ್‍ಯಾರಾದರೂ ನನ್ನ ಏನಾದರೂ ಕೇಳಿದರೆ ಏನು ಹೇಳಬೇಕು ?"

"ಗಂಡಸರ್‍ಯಾರೂ ನಿನ್ನ ಕೇಳೋರಲ್ಲ; ನನ್ನ ಕತೆ ಅವರಿಗೆ ಗೊತ್ತು. ಇನ್ನು ಹೆಂಗಸರು. ನಿನಗೆ ಹಿಂದಿ ಮಾತಾಡೋಕೆ ಬರೊಲ್ಲ ವಲ್ಲ ...ಆ ಹೆಂಗಸರಿಗೆ ಇಂಗ್ಲಿಷ್ ಅರ್ಥವಾಗೊಲ್ಲ. ಆದ್ರಿಂದ ನೀನು ಹಿಂದಿ ಮಾತಾಡೋಕೆ ಕಲಿಯೋದರೊಳಗಾಗಿ ನನ್ನ ಕಥೇನೆಲ್ಲಾ ಹೇಳ್ತೀನಿ....ನಿಧಾನವಾಗಿ ಕೇಳೂವಂತೆ."

"ಹೋಗಲಿ........ಇನ್ನೊಂದು ಮಾತು ಕೇಳ್ತೀನೆ........ನಿಜಾ ಹೇಳ್ತೀರಾ ?"

"ಏನು....? "

"ನಿಮಗೆ ನಿಜವಾಗಿ ಮದುವೇ ಆಗಿದೆಯೋ ?"

"ಆಗದೇನೇ ಈಗ ಅವರೆಲ್ಲಾ ನನ್ನ ಹೆಂಡತಿ ಪರಿಚಯಾ ಪಡೆದರೆ ?"

"ಹಾಸ್ಯ ಮಾಡಬೇಡಿ.......ಆ ಯೋಚನೇನೂ ನನ್ನ ತಲೇ ತಿಂತಾ ಇದೆ."

ಗಿರೀಶನು ಹಾಸ್ಯ ನಿಲ್ಲಿಸಿ, ಗಂಭೀರ ಮುಖಭಾವ ತಾಳಿ, 'ನನಗೇನೊ ಒಬ್ಬ ಹೆಂಡತಿ ಇದ್ದಾಳೆ' ಎಂದ. ಶಶಿಯು ಮನಸ್ಸು ಸ್ವಲ್ಪ ಅಳುಕಿತು.

"....ನೋಡೋಕೆ ಹೇಗಿದ್ದಾಳೆ. ..? ನಿಮ್ಮಂಥಾವರಿಗೆ ಸಿಕ್ಕೋ ಹೆಂಡತಿ ಲಕ್ಷಣವಾಗಿ-ಮುದ್ದಾಗಿಯೇ ಇರಬೇಕಲ್ಲವೆ ?...." ಎಂದು ಬಲವಂತ ನಗೆ ಬೀರುತ್ತ ಕೇಳಿದಳು. ಒಂದು ಕ್ಷಣ ಗಿರೀಶನು ಮೌನದಿಂದ ಅವಳನ್ನೇ ಈಕ್ಷಿಸಿದ. ಆ ಮೇಲೆ ಅವನ ದೃಷ್ಟಿ ಕೋಣೆಯಲ್ಲಿನ 'ಡ್ರೆಸಿಂಗ್ ಟೇಬಲ್' ಕಡೆಗೆ ಹೊರಳಿತು. ಅದರ ಮೇಲೆ ಮೂರು ನಾಲ್ಕು ಸಣ್ಣ ಚೌಕಟ್ಟುಗಳಲ್ಲಿ ಅಡಕವಾಗಿದ್ದ ಫೋಟೋಗಳಿದ್ದವು. ಶಶಿಯ ದೃಷ್ಟಿಯೂ ಅತ್ತ ಹೋಯಿತು. ಗಿರೀಶನು ಅವಳ ತೋಳು ಹಿಡಿದು ಕರೆದೊಯ್ಯುತ್ತ 'ಬಾ ! ನನ್ನ ಹೆಂಡತಿ ಹೇಗಿದ್ದಾಳೇಂತ ನೋಡೂವಂತೆ' ಎಂದು 'ಡ್ರೆಸಿಂಗ್ ಟೇಬಲ್' ಮುಂದೆ ನಿಂತ. ಶಶಿಯು ಅಲ್ಲಿದ್ದ ಫೋಟೋಗಳನ್ನೆಲ್ಲ ನೋಡಿ, "ಎಲ್ಲಿ ? ಹೆಂಗಸಿನ ಫೋಟೋ ಒಂದಾದರೂ ಇಲ್ಲವಲ್ಲ ?" ಎಂದಳು. ಗಿರೀಶನು, "ಎಲ್ಲಿ ನೋಡಬೇಕೋ ಅಲ್ಲಿ ನೋಡದಿದ್ದರೆ ಹೇಗೆ ಕಾಣಿಸುತ್ತೆ ? ಅಲ್ಲಿ ನೋಡು ನನ್ನ ಹೆಂಡತಿ" ಎಂದವಳನ್ನು 'ಡ್ರೆಸಿಂಗ್ ಟೇಬಲ್ಲಿ'ನ ಕನ್ನಡಿಯ ಕಡೆಗೆ ತಿರುಗಿಸಿ ನಿಲ್ಲಿಸಿದ. ಶಶಿಗಾದ ಆಶ್ಚರ್ಯದಲ್ಲಿ ಇದು ಎರಡನೆಯದು. ಈ ಬಾರಿ ಅವಳು ತನ್ನ ಆಶ್ಚರ್ಯ ವನ್ನು ಮರೆಮಾಚಿಕೊಳ್ಳಬೇಕಾಗಿದ್ದ ಪ್ರಮೇಯವೇನೂ ಇರಲಿಲ್ಲ.

"ನನಗಿನ್ನೂ ಅರ್ಥವಾಗ್ಲಿಲ್ಲ" ಎಂದು ಕನ್ನಡಿಯಲ್ಲಿನ ತನ್ನ ಪ್ರತಿಬಿಂಬದಿಂದ ಗಿರೀಶನ ಪ್ರತಿಬಿಂಬದಕಡೆಗೆ ದೃಷ್ಟಿ ಹೊರಳಿಸಿ ನುಡಿದಳು. ಅವಳ ತಲೆಯಲ್ಲಿ ವಿವಿಧಭಾವನಾತರಂಗಗಳೆದ್ದವು. ಹಿಂದೆಯೇ ಅನೇಕ ಪ್ರಶ್ನೆಗಳು ಹುಟ್ಟಿಕೊಂಡವು. ಅವೆಲ್ಲಕ್ಕೂ ಗಿರೀಶ ನಿಂದ ಕೂಡಲೇ ಉತ್ತರಪಡೆಯಲು ಅವಳ ಮನವು ಹಾತೊರೆಯು ತ್ತಿತ್ತು.

"ನಿನಗರ್ಥವಾಗದ ವಿಚಾರಗಳು ಪ್ರಪಂಚದಲ್ಲಿ ಬಹಳ ಇವೆ, ಶಶಿ! ಕ್ರಮೇಣ ಎಲ್ಲ ಗೊತ್ತಾದೀತು ಬಿಡು." ಎಂದು ಗಿರೀಶನು ಅವಳ ಮುಖದಿಂದ ಹೊರಬೀಳಲು ಸಿದ್ಧವಾಗಿದ್ದ ಪ್ರಶ್ನಾವಳಿಗೆ ತಡೆ ಹಾಕಿದ. ಗಡಿಯಾರವು ೧೧ ಘಂಟೆ ಹೊಡೆಯಿತು. ಶಶಿಯ ಮುಖವು ಗಂಭೀರವಾಯಿತು.

"ಏನು ಯೋಚಿಸುತ್ತಿದ್ದಿ ?"

"ನಿನ್ನೆ ಬೆಳಿಗ್ಗೆ ರೈಲು ಹತ್ತಿದಾಗ ಹೀಗೆಲ್ಲ ನನ್ನ ಜೀವನವೇ ಬದಲಾಗುತ್ತೇಂತ ನಾನು ಕನಸು ಮನಸಿನಲ್ಲೂ ಎಣಿಸಿರಲಿಲ್ಲ. ನಿನ್ನೆ ತಾನೆ ನನ್ನ ಪರಿಚಯ ನಿಮಗಾದ್ದು. ನನ್ನ ಚರಿತ್ರೆ ತಿಳಿದಮೇಲೂ ನನ್ನ ನೀವು ನಂಬ್ತೀರೇನು ?"

"ಒಂದೇ ಒಂದು ಘಂಟೇಗೆ ಹಿಂದೆ ಪರಿಚಯವಾದೋರ್ನ್ನೇ ಎಷ್ಟೋಸಲ ನಾವು ನಂಬಬೇಕಾಗಿ ಬರುತ್ತೆ. ನಾವು 'ಬಿಸಿನೆಸ್ ಪೀಪಲ್ಲು' ನೋಡು. 'ಮೋರೋವರ್' ನನಗೆ ನಿನ್ನ ಗುರುತಾಗಿ ಒಂದಲ್ಲ-ಎರಡಲ್ಲ ೨೭ ಘಂಟೆಗಳಾಗಿವೆ. 'ವಟ್ಸ್ ಎ ಲೈಫ್ ಟೈಂ, ಯು ನೊ'.... ..."

ಶಶಿಯು, "ಆದರೂ ನನ್ನ ಪ್ರಶ್ನೆಗುತ್ತರ ಒರಲಿಲ್ಲ. ಹೇಳಿ.... ನನ್ನಲ್ಲಷ್ಟು ನಂಬಿಕೆ ಇದ್ಯೇ? ನಾನಿನ್ಯಾರಜೊತೆಯಲ್ಲಾದ್ರೂ ಓಡಿ ಹೋದರೇನು ಮಾಡ್ತೀರಿ?" ಎಂದವನ ಕಡೆಗೆ ಮುಖ ತಿರುಗಿಸಿ ಕೇಳಿದಳು. ಗಿರೀಶನು ಒಂದು ಕ್ಷಣ ತಡೆದು ಕೋಣೆಯಸುತ್ತಲೂ ಒಮ್ಮೆ ನೋಡಿ, ಅನಂತರ ಮಾತನಾಡಿದ:

"ಇಲ್ಲಿರುವವರೆಲ್ಲ ಬಹಳ ಒಳ್ಳೆಯವರು, ಶಶೀ! ನನ್ನಾತ್ಮೀಯರು ...ನಾನೀ ಜನಗಳ ಮಧ್ಯೆ ಬಹಳ ದಿನಗಳಿಂದಿದ್ದೇನೆ....ನೀನು ಹಾಗೊಂದುವೇಳೆ ಹೋದರೆ..ಇವರೆಲ್ಲರಿಂದ ನಾನು ತಲೆಮರೆಸಿಕೊಂಡು ಹೋಗಬೇಕಾಗುತ್ತೆ..ಆದರೆ ಹಾಗಾಗುವ ಭಯವಿಲ್ಲ..ಏಕೇಂತೀಯೋ?. ಅನುಭವಾನ್ನೋದು ಜೀವನದಲ್ಲಿ ಬಹಳ ಮುಖ್ಯ ಶಶಿ. ಏನೋ ನೀನೂ ಒಂದುಸಲ ದುಡುಕಿದೆ; ಅದರ ಫಲಾನೂ ಕಂಡೆ. ಪಶ್ಚಾತ್ತಾಪಾನೂ ಪಟ್ಟಿದ್ದಿ. ಹೊಸ ಹಾಳೆ ತಿರಿವಿಹಾಕೋಕೆ

ನಿನಗೊಂದು ಅವಕಾಶ ಸಿಕ್ಕದೇ ಇದ್ರೆ ಪಶ್ಚಾತ್ತಾಪ ಪಟ್ಟದ್ದಕ್ಕೇನು ಸಾರ್ಥಕ? ಅನುಭವವಿದ್ದೇನು ಆದ ಹಾಗಾಯ್ತು? ನಿನಗಾ ಅವಕಾಶ ಕೊಡಬೇಕಾದ್ದು ಧರ್ಮ. ಕೊಡೋಕೆ ನಾನು ಸಿದ್ಧವಾಗಿದ್ದೇನೆ. ನನ್ನ ಹೆಂಡತೀಂತ ನಾನು ನಿನ್ನ ಅವರೆಲ್ಲರೆದುರಿಗೆ ಹೆಮ್ಮೆಯಿಂದ ನಿಲ್ಲಿಸೋ ಅಷ್ಟು ಭರವಸೆ ನಿನ್ನಲ್ಲಿಟ್ಟಿದ್ದೇನೆ"

ಶಶಿಗೆ ಪಳ್ಳನೆ ಕಣ್ಣಿನಲ್ಲಿ ನೀರುಕ್ಕಿ ಬಂತು, "ಆದರೆ ನನಗಾ ಭರವಸೆ ಇದೆಯೇಂತ...."

"ಇದೇಂತ ತೋರಿಸೋದು ನಿನ್ನ ಕೈಲೇ ಇದೆ.... ..ಅಗೋ! ಅಗೋ! ಮತ್ತೆ ಜಲಪ್ರಳಯವೇನಾದರೂ ಆಗೋ ಹಾಗಿದ್ರೆ ನಾನು ಆಶ್ರಮ ಹುಡಕ್ಕೊಂಡು ಬರೋಕೆ ಹೋಗ್ತೇನೆ." ಎಂದು ಗಿರೀಶನು ಶಶಿಯ ಕಣ್ಣೊರೆಸಲು ಷರಾಯಿ ಜೇಬಿನಿಂದ ಕರವಸ್ತ್ರವನ್ನು ಹೊರಕ್ಕೆ ತೆಮಕೊಂಡ. ಕರವಸ್ತ್ರನೊಡನೆ ನೋಟುಗಳ ಸಣ್ಣ ಕಟ್ಟೊಂದು ಹೊರಕ್ಕೆ ಬಿದ್ದಿತು. ಅದನ್ನು ಕೈಗೆತ್ತಿಕೊಂಡು "ಓಹೋ! ಮರತೇ ಹೋಗಿದ್ದೆ. ಸ್ತ್ರೀಧನ! 'ವಿವಾಹಮಹೋತ್ಸವ ಕಾಲದಲ್ಲಿ ವಧುವಿಗೆ ಹಿರಿಯರು ಆಶೀರ್ವಾದ ಮಾಡಿಕೊಟ್ಟಂತಹ ೪೦೦ ವರಹಾ' ಸದ್ಯಕ್ಕೆ ನೋಟುಗಳ ರೂಪದಲ್ಲಿ ..." ಎಂದವಳ ಕೈಯಲ್ಲಿಟ್ಟ. ಶಶಿಯ ಕಣ್ಣುಗಳಲ್ಲಿ ಮೊದಲೇ ನೀರು ತುಂಬಿತ್ತು; ಗಿರೀಶನ ಈ ಹೊಸ ವಾಗ್ವೈಖರಿಯಿಂದ ಅವಳ ಪುಟ್ಟ ಬಾಯಿಯ ಸುತ್ತಲೂ ಕಿರುನಗೆಯು ಕುಣಿಯಲಾರಂಭಿಸಿತು. ಮಳೆ ಹನಿ ಹಾಕುತ್ತಿದ್ದಾಗ ಬಿಸಿಲು ಬಂದಂತೆ ಆ ಕಿರುನಗೆಯು ಕಂಡಿತು. ಗಿರೀಶನು ಆ ಮನೋಹರ ದೃಶ್ಯವನ್ನು ನೋಡಿ "ಎಷ್ಟು ಸುಂದರವಾಗಿ ಕಾಣುತ್ತಿ" ಎಂದ.

"ಈಗ್ಗ ಕವಿಯಾಗಲಾರಂಭಿಸಿದಿರೇನು?"

"ನೀನೇ ನನ್ನ ಕವನವಲ್ಲವೇನು?"

"ನಿನ್ನೆ ನಿಮ್ಮ ಮುಖನೋಡೋಕೆ ಅಸಹ್ಯಪಟ್ಟುಕೊಂಡೋಳು ನಾನು; ಅದನ್ನ ನೆನೆಸಿಕೊಂಡರೆ ಈಗ ನನಗೇ ನಾಚಿಕೆಯಾಗುತ್ತೆ"

"ನನ್ನ ಮುಖನೋಡೋ ಅಂಥಾದ್ದೇನೂ ಅಲ್ಲ ಬಿಡು ; ಅದನ್ನ ದಿನವೂ ನೋಡೋಕೆ ನನಗೇ ಆಸಹ್ಯವಾಗುತ್ತೆ. ಅದಕ್ಕೇ ನನಗೂ ಕನ್ನಡಿಗೂ ಬಹಳ ದೂರ ?"

"ಆ ಮುಖದ ಮೂಲಕ ಹೃದಯಾನ ನಾನು ನೋಡ್ತಾ ಇದ್ದೇನೆ. ಎಷ್ಟು ಮೃದು ಹೃದಯಾ ಅದು !"

"ಶಶಿ ! ನಾನೊಂದು ಮಾತು ಕೇಳ್ಬೇಕೂಂತ ಇದ್ದೇನೆ...."

"ಕೇಳಿ....ಅದಕ್ಕೇನಂತೆ ?"

"ನಿನ್ನೆ ದಿನ ಅವನು, ಸೀನವನ ತಂಗೀಂತ ಹೇಳಿದಾಗ ನಿನಗೆಷ್ಟು ಆಸಹ್ಯವಾಯಿತೊ ಅಷ್ಟು....ಸೀನು ನನ್ನ ಹೆಂಡತೀಂತ ಇವರಿಗೆ ನಾನು ತಿಳಿಸಿದಾಗ ಅಸಹ್ಯವಾಯಿತೆ ?"

"....ನಾ ಕಾಣೆ ; ನಾಲ್ಕು ದಿನ ಕಳೆದ ಮೇಲೆ ಅದಕ್ಕುತ್ತರ ಹೇಳ್ತೀನೆ...." ಎಂದು ಶಶಿಯು ನಸುನಗುತ್ತ ಮನೆಯ ಪರೀಕ್ಷೆಗೆ ತೊಡಗಿದಳು. ಹಾಗೇ ನೋಡುತ್ತ ಗಿರೀಶನ ಮೇಜಿನ ಬಳಿಗೆ ಹೋದಳು. ಇಂಗ್ಲೀಷಿನಲ್ಲಿ ಒಂದು ವಾಕ್ಯವನ್ನು 'ಟೈಪ್' ಮಾಡಿ ಅದನ್ನು ಒಂದು ಪುಟ್ಟ ಫೋಟೋ ಫ್ರೇಮಿನಲ್ಲಿ ಸೇರಿಸಿ, ಗಿರೀಶನು ತನ್ನ ಮೇಜಿನಮೇಲಿಟ್ಟುಕೊಂಡಿದ್ದನು. ಶಶಿಯು ಅದನ್ನು ಕುತೂಹಲದಿಂದ ಕೈಗೆತ್ತಿಕೊಂಡು ಓದಿದಳು :—

"Remember the day when you were born,
All were laughing but you were crying;
Lead such a life that when you die,
Others should weep while you go laughing"

—SAADI.

ಎಂದಿತ್ತು. ಒಂದು ಕ್ಷಣ ಹಾಗೇ ಯೋಚನಾಮಗ್ನಳಾಗಿ ನಿಂತಳು. ಅನಂತರ ಹಸನ್ಮುಖಿಯಾಗಿ ಗಿರೀಶನ ಕಡೆ ತಿರುಗಿ, "ನಿಮ್ಮ ವಿಚಾರ........ನಾನು ತಿಳ್ಕೋಬೇಕಾದ್ದಿನ್ನೂ ಬಹಳವಿದೆ" ಎಂದಳು. ಗಿರೀಶನು ಮುಗುಳ್ನಗೆ ನಕ್ಕ. ಉಮಾಭಾಬಿಯು 'ಟೀ ಸಿದ್ಧವಾಗಿದೆ' ಯೆಂದು ಬಾಗಿಲಲ್ಲೇ ನಿಂತು ಕೂಗಿದುದು ಅವರ ಕಿವಿಗೆ ಬಿತ್ತು.

# ಆಕಾಂಕ್ಷೆ

**31—8—1940** :



ಸುಮಾರು ರಾತ್ರಿ ೯-೩೦ ಘಂಟೆ ಸಮಯವಿರಬಹುದು. ಬೆಂಗಳೂರು ನಗರದ ಮನೆಯ ದೀಪಗಳೆಲ್ಲಾ ಒಂದಾದ ಮೇಲೊಂದು ಆರುತ್ತಿವೆ. ಆದರೆ ಮೂರ್ತಿಯ ಕೊಠಡಿಯಲ್ಲೇನೊ ಇನ್ನೂ ದೀಪ ವಿತ್ತು. ಅದು ಸದ್ಯದಲ್ಲೇ ಆರುವ ಸಂಭವವೂ ಇರಲಿಲ್ಲ. ಮೂರ್ತಿಯು ಆಗತಾನೇ ಕುಳಿತು ಏನೋ ಬರೆಯುವುದರಲ್ಲಿ ಮಗ್ನನಾಗಿ ಹೋಗಿದ್ದ. ಮೇಜಿನ ಮೇಲೆ ಅವನ ಎಡ ಬದಿಗೆ ೨-೩ ಬರವಣಿಗೆಯಿಂದ ತುಂಬಿದ್ದ ಹಾಳೆಗಳು ಬಿದ್ದಿದ್ದವು. ಅವನ ಎಡಗೈಲಿ ಸಿಗರೇಟೊಂದು ಹೊಗೆ ಯಾಡುತ್ತಿತ್ತು. ರಾಜಮ್ಮನು ಮೆಲ್ಲನೆ ಬಾಗಿಲನ್ನು ತಳ್ಳಿಕೊಂಡು ಕೋಣೆಯೊಳಕ್ಕೆ ಬಂದಳು. ಅವಳು ಬಂದುದನ್ನು ಮೂರ್ತಿ ಗಮನಿಸ ಲಿಲ್ಲ. ಮೂರ್ತಿಯ ಬರವಣಿಗೆಗೆ ಅಡ್ಡಿಯಾಗುವ ಮನಸ್ಸು ರಾಜಮ್ಮನಿ ಗಿಲ್ಲದಿದ್ದರೂ ಅವಳ ಹೃದಯವು ಅದೇಕೊ ಮನಸ್ಸಿನ ನಿರ್ಧಾರಕ್ಕೆ ಬೆಲೆ ಕೊಡಲಿಲ್ಲ.

"ಥೂ! ಸಿಗರೇಟು ವಾಸ್ನೆ ತುಂಬಿಹೋಗಿದೆ ಚಿಕ್ಕನೇ ತುಂಬ" ಎಂದಳು.

ಮೂರ್ತಿಯ ಲೇಖನಿಯು ಓಟಕ್ಕೆ ಕಲ್ಲುಬಿತ್ತು. ಲೇಖನಿಯನ್ನು ಅಸಮಾಧಾನದಿಂದ ಕೆಳಗಿಟ್ಟು, ರಾಜಮ್ಮನ ಕಡೆ ನೋಡಿದ. ಅವನ ಅಸಮಾಧಾನ ರಾಜಮ್ಮನಿಗೆ ಗೊತ್ತಾಗದೆ ಹೋಗಲಿಲ್ಲ. ಗೊತ್ತಾದರೂ ಅವಳದಕ್ಕೆ ಅಂಜಲಿಲ್ಲ.

"ಏನು ಇಷ್ಟೊತ್ತು ಬರೆದರೂ ಮುಗೀಲಿಲ್ಲವೇ.... ಬೆಳಿಗ್ಗೆ ಬರೆದ ರಾಗದೇನೊ?" ಎಂದು ಆಕ್ಷೇಪಿಸಿದಳು.

"ಇಲ್ಲಾ ರಾಜೀ! ನಾಳೆ ಟಪ್ಪಾಲಿಗೆ ಇದು ಹೋಗಲೇ ಬೇಕು. ಬೆಳಿಗ್ಗೆ ಅವರೂ ಇವರೂ ಸ್ನೇಹಿತರು ಬಂದುಹೋಗೋ ಗಲಾಟೇಲಿ ಏನೂ ಬರೆಯೋಕಾಗೊಲ್ಲ. ಹಾಗೆಲ್ಲಾ ಆಗೋ ಹಾಗಿದ್ರೆ ಈಗ್ಯಾಕೆ ಬರೆಯೋಕೆ ಕೂತ್ಕೋತಾ ಇದ್ದೆ?"

" ಸಾಕು, ಎತ್ತಿಡೀಂದ್ರೆ, ಇದ್ದೇ ಇದೆ. ಯಾವಾಗ್ಲೊ ನಿಮ್ಮ ಪುರಾಣ; ಬೇಕಾದ್ರೆ, ಬೆಳಿಗ್ಗೆ ನಿಮ್ಮನ್ನ ಹುಡಕ್ಕೊಂಡು ಯಾರು ಬಂದ್ರೂ ' ಇಲ್ಲಾ 'ಂತ ಹೇಳಿಬಿಡ್ತೇನೆ. ಯಾರ ತೊಂದರೇನೂ ಇಲ್ದೆ ಬೆಳಿಗ್ಗೇ ಇಂದ ಸಾಯಂಕಾಲದ ತನಕಾ ಬರೀತಾ ಕೂತ್ಕೊಳ್ಳಿ."

" ಆಗೊಲ್ಲ-ರಾಜಿ....ಹಗಲು ಹೊತ್ತು ಹುಡುಗರ ಗಲಾಟೆ.... ಈಗ್ಲೇ ಬರೆದು ಮುಗಿಸ್ಬೇಕು—ಈಗ ಮುಗಿಸ್ಬಿಡ್ತೇನೆ. ಅದೆಷ್ಟು ಹೊತ್ತಿನ ಕೆಲಸ. ನೀನು ಸ್ವಲ್ಪ ಹೊತ್ತು ಸುಮ್ಮನೇ ಇದ್ರೆ ಸಾಕು.... ಇಲ್ದೇ ಇದ್ರೆ ಸ್ವಸ್ಥವಾಗಿ ಮಲಗು; ನೀನ್ಯಾಕೆ ಎದ್ದಿರಬೇಕು ?"

ರಾಜಮ್ಮನ ಮುಖದಲ್ಲಿದ್ದ ಗೆಲುವು—ಸಂತೋಷಗಳು ಉಡುಗಿ ಹೋದುವು. ಕಣ್ಣಿನಲ್ಲಿ ನೀರುಕ್ಕಿಬರುವ ಹಾಗಾಯಿತು. ಮೂರ್ತಿಯ ಹಿಡಿತದಿಂದ ಕೈ ಕೊಸರಿಕೊಂಡು ಹೋಗಿ ಹಾಸಿಗೆಯ ಮೇಲೆ ಉರುಳಿ ಕೊಂಡಳು. ಪಾಪ! ಅವಳ ಮನಸ್ಸಿನಲ್ಲಿ ಒಂದು ಕೊರತೆ. ಗಂಡ ನೊಂದಿಗೆ ಹೇಳಲಾರಳು — ಹೇಳದೆ ಇರಲಾರಳು. ಹಗಲೆಲ್ಲಾ ಅತ್ತೆಮಾವಂದಿರ ಮುಂದೆ ಓಡಾಡುತ್ತ ಮನೆಗೆಲಸಗಳಲ್ಲಿ ಮುಳುಗಿರು ವಳು. ಗಂಡನೊಂದಿಗೆ ಆಗ ಮಾತನಾಡಿದಲ್ಲಿ ದೊಡ್ಡವರು ಏನೆಂದು ಕೊಳ್ಳುವರೋ ಎಂಬ ಅಂಜಿಕೆ. ಮಧ್ಯಾಹ್ನದ ಹೊತ್ತು ಮೂರ್ತಿಯೇ ಮೂರುಪಾಲು ಮನೆ ಸೇರುತ್ತಿರಲಿಲ್ಲ. ಅಪ್ಪಿತಪ್ಪಿ ಮನೆಗೆ ಬಂದರೆ, ಸುತ್ತಿ ಸಾಕಾಯಿತೆಂದು ಮಲಗಿಬಿಡುತ್ತಿದ್ದ. ಆಗ ಅವನೊಡನೆ ಮಾತನಾಡುತ್ತ ಕೂಡಲೆತ್ನಿಸಿದರೆ ರೇಗಿಬಿಡುತ್ತಿದ್ದ. ಸಂಜೆಯಿಂದ ರಾತ್ರಿ ೯, ೯-೩೦ ರ ವರೆಗೂ ಮನೆಗೆಲಸವೇ ಆಗಿಬಿಡುತ್ತಿತ್ತು. ಸ್ವಲ್ಪ ಹೊತ್ತಾದರೂ ಮನಸ್ಸಿಗೆ ಹರ್ಷವುಂಟಾಗುವಂತೆ ಮನೆಯವರೊಂದಿಗೇ-ನಗುತ್ತ-ಆಡುತ್ತ ಕುಳಿತುಕೊಳ್ಳಲು ತನ್ನ ಸಮವಯಸ್ಸಿನ ಹುಡುಗಿಯ ರಾರೂ ಮನೆಯಲ್ಲಿಲ್ಲ. ಇದ್ದವರೆಲ್ಲ ಚಿಕ್ಕವರು-ಇಲ್ಲ-ದೊಡ್ಡವರು ಯಾರೇನಾದರೂ ಅಂದುಕೊಂಡು ಹೋಗಲೆಂದು ಗಂಡನೊಂದಿಗೆ ಸಲಿಗೆಯಿಂದ ಮಾತನಾಡಲು ಧೈರ್ಯವಿಲ್ಲ; ಅತ್ತೆಯ ಮನೆಗೆ ಬಂದು

ಇನ್ನೂ ಆರು ತಿಂಗಳಾಗಿತ್ತು. ರಾತ್ರಿಯಾದರೂ ಮಲಗುವ ಮುಂಚೆ ಗಂಡನೊಂದಿಗೆ ಸ್ವಲ್ಪ ಸರಸವಾಗಿ ಕಾಲ ಕಳೆಯೋಣವೆಂದರೆ ಅವನು ಹೆಚ್ಚು ಮಾತನ್ನೇ ಆಡುತ್ತಿರಲಿಲ್ಲ. ಇನ್ನವಳು ತನ್ನ ಸಂಕಟವನ್ನು ಮತ್ಯಾರ ಸಂಗಡ ಹೇಳಿಕೊಳ್ಳಬೇಕು? ಪಾಪ! ತನ್ನೊಳಗೇ ಇಟ್ಟು ಕೊಂಡು ದುಃಖಿಸುತ್ತಿದ್ದಳು.

ರಾಜಮ್ಮನ ಕಣ್ಣಿನಲ್ಲಿ ನೀರು ತುಂಬಿದ್ದು ಮೂರ್ತಿಗೆ ಕಾಣದೆ ಹೋಗಲಿಲ್ಲ. ಆದರೂ ಅವನದೊಂದು ಹಠದ ಸ್ವಭಾವ. ತಾನು ಮಾಡಬೇಕೆಂದು ಮನಸ್ಸುಮಾಡಿದ್ದನ್ನು ಮಾಡಿಯೇ ತೀರುತ್ತಿದ್ದ. ತಾನು ಬರೆಯುತ್ತಿದ್ದ ಕಾಗದವನ್ನು ಬರೆದು ಮುಗಿಸಿ, ಮಲಗಿದ. ಇಬ್ಬರಿಗೂ ಒಂದೊಂದು ಬಗೆಯ ಕೋಪವಿದ್ದುದರಿಂದ ಇಬ್ಬರೂ ಕೊಂಚಕಾಲ ಮಾತನಾಡಲಿಲ್ಲ. ಆ ಮೇಲೆ ಮೂರ್ತಿಯೇ ಮಾತು ತೆಗೆದ. ತನ್ನ ಮನಸ್ಸಿನಲ್ಲಿದ್ದುದನ್ನು ಅಂದು ರಾಜಿಗೆ ತಿಳಿಸಿಬಿಡ ಬೇಕೆಂದು ಅವನಿಗನ್ನಿಸಿತು.

"ರಾಜಿ ..."

"..............."

"ನಾನು ಏನು ಬರೆಯುತ್ತಿದ್ದೆ ಗೊತ್ತೆ ?"

"........... ......."

"ಸೈನ್ಯಕ್ಕೆ ಸೇರಿಕೊಳ್ಳುತ್ತೇನೆ ........ ಅದಕ್ಕೆ ಸಂಬಂಧಿಸಿದ ಕಾಗದಗಳವು"

"ಸೈನ್ಯಕ್ಕೆ ಸೇರಿಕೊಂಡು....?"

"ಯುದ್ಧಕ್ಹೋಗ್ತೇನೆ. ಜರ್ಮನೀ ಕೈ ಈಗ ಬಲವಾಗಿ ಇದೆ; ಅದಕ್ಕೆ ತಕ್ಕ ಹಾಗೆ ತಮ್ಮ ಸೈನ್ಯಾನೂ ಹೆಚ್ಚಿಸ್ಕೋಬೇಕೂಂತ ಬ್ರಿಟಿಷ್ನೋರು ಸೈನ್ಯಕ್ಕೆ ಜನಗಳನ್ನ ಕರ್ದಿದ್ದಾರೆ. ತುಂಬಾ ಜನ ಡಾಕ್ಟರುಗಳೂ ಬೇಕಂತೆ; ನಾನೂ ಅರ್ಜಿಹಾಕಿದ್ದೆ. ನನಗೆ

'ಅಪ್ಲಿಕೇಷರ್ ಫಾರಮ್ಮು, ಡಿಕ್ಲರೇಷರ್ ಫಾರಮ್ಮು' ಇವುಗಳೆಲ್ಲಾ ಬಂದವು. ಅವೇ ಇಷ್ಟು ಹೊತ್ತೂ ನಾನು ಭರ್ತಿಮಾಡ್ತಾ ಇದ್ದದ್ದು. ನಾನು ಸೈನ್ಯಕ್ಕೆ ಸೇರ್ಕೊಳ್ಳೋದು ನಿನಗಿಷ್ಟವಿಲ್ವೆ....?

"ನೀವೇನಾದರೂ ಸೈನ್ಯಕ್ಕೆ ಸೇರ್ಕೋಬೇಕಂತೆ......ಆವಾಗ ಹೇಳ್ತೀನೆ."

"ಏನು ಹೇಳ್ತಿ ?"

"....ಹೇಳೋದೇನಿದೆ....ಹ್ಯಾಗಿದ್ರೂ ಅಲ್ಮಾರಿನಲ್ಲಿ ಶೀಷೆ ತುಂಬ 'ಟಿಂಕ್ಚರ್ ಅಯೊಡಿನ್' ಇಟ್ಟಿದ್ದೀರಲ್ಲಾ........ಕುಡಿದು ಪ್ರಾಣಾ ಬಿಡ್ತೀನೆ....ಅಷ್ಟೆ...."

"....ಹುಚ್ಚಿ ನೀನು....ಹಾಗೆ ಮಾಡಿದರೆ ಏನು ಭಾಗ್ಯ ಬಂದ ಹಾಗಾಯ್ತು ?....ನಾನು ಸೈನ್ಯಕ್ಕೆ ಸೇರ್ಕೊಂಡ್ರೆ ನೀನ್ಯಾಕೆ ಪ್ರಾಣಾ ಕಳ್ಕೊಳ್ಳೊ ಯೋಚ್ನೆ ಮಾಡಬೇಕು ?"

"....ಯುದ್ಧಕ್ಹೋದೋರೆಲ್ಲ ಯಾರು....ಹಿಂದಕ್ಬರ್ತಾರೆ ?...." ಸುಮ್ನೆ ನನ್ನ ಬಾಯಲ್ಲಿ ಯಾಕೆ ಈ ಮಾತೆಲ್ಲಾ ಆಡಸ್ಬೇಕೂಂತ ಪ್ರಯತ್ನಪಡ್ತೀರಿ" ಎಂದು ಮುಖ ಮುಚ್ಚಿಕೊಂಡಳು. ತನ್ನ ಎದೆಯ ದುಃಖವು ಬಯಲಾಗದಿರಲೆಂದು ರಾಜಮ್ಮನು ಬಹಳ ಪ್ರಯತ್ನ ಪಟ್ಟಳು. ಆದರೆ ಸಾಧ್ಯವಾಗಲಿಲ್ಲ. ಮೂರ್ತಿಯು ಸ್ವಲ್ಪ ಒರಟ ನಾದರೂ ಅವನಿಗೆ ಕಲ್ಲು ಮನಸ್ಸಿರಲಿಲ್ಲ. ರಾಜಮ್ಮನಿಗೆ ಸಮಾಧಾನ ಮಾಡಲೆತ್ನಿಸಿದ. ಆದರೆ ವಿಶೇಷವಾಗಿ ಅವನು ಹೆಂಗುಸರೊಂದಿಗೆ ಕೂಡಿಯಾಡಿ ಬೆಳೆದವನೇ ಅಲ್ಲ. ಆದ್ದರಿಂದ ಅವನಿಗೆ ಹೆಂಗುಸರೊಂದಿಗೆ ಅಷ್ಟೇಕೆ ತನ್ನ ಹೆಂಡತಿಯೊಂದಿಗೇ ತಾನು ಹೇಗೆ ನಡೆದುಕೊಳ್ಳಬೇಕು, ಹೇಗೆ ಮಾತನಾಡಬೇಕೆಂಬುದರ ತಿಳುವಳಿಕೆ ಇರಲಿಲ್ಲ. ರಾಜಿಯನ್ನು ಸಮಾಧಾನಪಡಿಸಲು ಒಂದು ಪುಟ್ಟ ಉಪನ್ಯಾಸಕ್ಕಾರಂಭಿಸಿ ಬಿಟ್ಟ. ರಾಜಿಯು ತುಟಿಪಿಟಕ್ಕೆನ್ನಲಿಲ್ಲ. ಸುಮ್ಮನೆ ಅವನ ಮಾತೆಲ್ಲ ಕೇಳಿದಳು, ಅನಂತರ ಮೂರ್ತಿಯ ಪ್ರಶ್ನಾವಳಿಗಾರಂಭವಾಯಿತು.

" ಹೇಳು ರಾಜಿ....ನಿನಗೆ ನಾನು ಹೀಗೇ ಇರುವುದು ಇಷ್ಟವೋ, ಇಲ್ಲ ಸೈನ್ಯಕ್ಕೆ ಸೇರಿ, ನಾನೂ ಒಂದು ಪದವಿ ಸಂಪಾದಿಸಿಕೊಂಡು 'ದೊಡ್ಡ ಡಾಕ್ಟರು' ಅನ್ನಿಸಿಕೊಳ್ಳೋದು ಇಷ್ಟವೊ ?"

"..............."

" ಈಗ ನೋಡು....ನಮ್ಮವರೆಲ್ಲ ನನ್ನ ಹೆಚ್ಚುಕಡಿಮೆ ಕೀಳಾಗೇ ಕಾಣ್ತಾರೆ."

"ನಾನು ಒಬ್ಬನೇಇದ್ದಿದ್ರೆ ನನಗಿದರ ಯೋಚನೇನೇ ಇರ್ತಿರಲಿಲ್ಲ. ಆದರೆ ನಿನ್ನ ಮದುವೆಯಾದೆ. ನನ್ನ ಹೆಂಡತಿಯಾದ್ದಕ್ಕೆ ನೀನು ತಲೆತಗ್ಗಿಸೋ ಹಾಗಾಗಬಾರದು. ನಿನಗೋಸ್ಕರ ನಾನೀಯೋಚನೆ ಮಾಡ್ತಿರೋದು....ಎರಡು ಮೂರು ತಿಂಗಳಾದ ಮೇಲೆ ನಮಗೆ ಕ್ವಾರ್ಟ್ರಸ್ ಕೊಡ್ತಾರೆ....ಆಗ ನಿನ್ನ ನಾನಿರೋಜಾಗಕ್ಕೆ ಕರೆಸಿಕೋಬಹುದು.

...............

" ನಾನೀಗ ಸೈನ್ಯಕ್ಕೆ ಸೇರಿಕೊಂಡರೆ........ನನಗೆ ನಾಲ್ಕಾರಕಡೆ ಅನುಭವ ದೊರೆಯುತ್ತೆ ........ ಕಷ್ಟಪಟ್ಟು ಕೆಲಸಮಾಡಿ ಒಂದು ಹೆಚ್ಚಿನ ಸ್ಥಾನ ಪಡೀತೀನಿ.... ...ಆ ಮೇಲೆ ಹಿಂತಿರುಗಿ ಬಂದರೆ.... ನಮ್ಮವರಿಗೆಲ್ಲ ನಾಚಿಕೆಯಾಗಬೇಕು .......ಹಾಗೆ ಬರಬೇಕು. ನನ್ನ ಅಂತಸ್ತು ಯಾವಾಗ ಹೆಚ್ಚುತ್ತೋ ಆಗ ನಿನ್ನ ಅಂತಸ್ತೂ ತಾನಾಗಿಯೇ ಹೆಚ್ಚುತ್ತೆ. ನಿನಗೂ ಎಲ್ಲ ಕಡೆಯಿಂದಲೂ ಗೌರವವಿರುತ್ತೆ...."

"..............."

" ಹೌದೋ ಅಲ್ಲವೋ ನೀನೇ ಹೇಳು ? ಸೈನ್ಯಕ್ಕೆ ಸೇರಿಕೊಂಡು ಬಿಟ್ಟಾಕ್ಷಣಕ್ಕೆ ನನ್ನೇನೂ ಯುದ್ಧಭೂಮೀಗೆ ಕಳಿಸೋದಿಲ್ಲ. ಡಾಕ್ಟರು ಗಳಿಗೆಲ್ಲಾ ಆಸ್ಪತ್ರೆಗಳಲ್ಲೇ ಕೆಲಸ. ಸೈನಿಕರಿಗೆ ಚಿಕಿತ್ಸೆ ನೀಡೋದಕ್ಕೇ ನಮ್ಮನ್ನ ತೆಗೆದುಕೊಳ್ಳೋದು....ಅದೂ ಅಲ್ಲದೆ ಈಗಿನ ಪರಿಸ್ಥಿತೀಲಿ ನಮ್ಮನ್ನ ನಮ್ಮ ದೇಶದಿಂದ ಹೊರಕ್ಕೆ ಕಳಿಸೋದೇ ಅನುಮಾನ.... ಆದ್ದರಿಂದ ನಮಗೇನೇನೂ ಪ್ರಾಣಭಯವಿರೊಲ್ಲ....ಹೇಳು ನಾನು ದೊಡ್ಡಮನುಷ್ಯಾಂತನ್ನಿಸ್ಕೊಳ್ಳೋದು ನಿನಗಿಷ್ಟವಿದ್ಯೋ ಇಲ್ವೊ ?"

" ಇದೆ........"

" ಮತ್ತೆ ನಾನು ಸೈನ್ಯಕ್ಕೆ ಸೇರ್‍ಕೊಳ್ಳೋಕೂ ನಿನಗೊಪ್ಗೆ ತಾನೆ ?"

" ............"

" ಪುನಃ ಈ ವಿಚಾರ ಬಂದಾಗ ಅಳೋದಾಗಲಿ ಅಥವಾ ಇನ್ನೇನಾದರೂ ಯೋಚನೆ ಮಾಡೋದಾಗಲಿ ಸುತರಾಂ ಕೂಡದು. ಹೇಳು, ಹಾಗೆ ಮಾಡೊಲ್ಲಾಂತ ?"

" ಇಲ್ಲ..... ..ಮಾಡೊಲ್ಲ........"

"....ಈಗ ನನ್ನ ಮುಖ ನೋಡು; ನಗನಗ್ತಾ ಜವಾಬು ಕೊಡಬೇಕು..... ..ನಾನು ಸೇರಿಕೊಳ್ಳಲೊ........?"

ರಾಜಮ್ಮನಿಗೆ ಉಭಯ ಸಂಕಟ. ಇತ್ತ ಬೇಡವೆಂದರೆ ಗಂಡನ ಮನಸ್ಸಿಗೆ ನೋವಾಗಬಹುದು; ಜೊತೆಗೆ ಪತಿಯು ದೊಡ್ಡ ಮನುಷ್ಯ ನಾಗಿ ಹೆಚ್ಚಿನ ಧನ-ಗೌರವಗಳನ್ನು ಸಂಪಾದಿಸುವುದು ತನಗಿಷ್ಟವಿಲ್ಲ ವೆಂದಂತಾಗುವುದು. ಯಾವ ಹೆಂಗಸಿಗೆ ತಾನೆ ತನ್ನ ಪತಿಯ ಅಭ್ಯುದ ಯದ ಆಕಾಂಕ್ಷೆಯಿರದು? " ಹುಂ! ಸೇರಿಕೊಳ್ಳಿ" ಎಂದರೆ ಮುಂದೆ ತನ್ನ ಹಿರಿಮೆಯನ್ನೆಂದೋ ಸಾಧಿಸಿಕೊಳ್ಳಲು-ಅಥವಾ ತನ್ನ ಸ್ಥಾನ ಮಾನಗಳನ್ನು ಹೆಚ್ಚಿಸಿಕೊಳ್ಳಬೇಕೆಂಬ ಸ್ವಾರ್ಥದಿಂದ, ಅಭಿಮಾನ ದಿಂದ ತನ್ನ ಪತಿಯನ್ನು ಮೃತ್ಯು ಮುಖಕ್ಕೆ ದೂಡಲೂ ಸಿದ್ಧಳಾಗಿರುವ ಳೆಂಬ ಭಾವನೆ ಬರುವುದು. ಮನಸ್ಸಿನಲ್ಲಿ ಈ ತುಮುಲ ಯುದ್ಧ ವಾಗುತ್ತಿರಲು, ಮೇಲೆ ಪತಿಯ ಮನಸ್ಸಮಾಧಾನಕ್ಕಾಗಿ ಕಿರುನಗೆ ಯನ್ನು ಮುಖದಲ್ಲಿ ತೋರಿದಳು. ಆದರೆ ಬಾಯಿಯಿಂದಾವ ಖಚಿತ ಉತ್ತರವನ್ನೂ ಹೇಳದೆ, "........ಇಲ್ಲ ......ಇನ್ನು ಮೇಲೆ ನಾನು ಅಳೋದಿಲ್ಲ; ನಿಮ್ಮ ಮನಸ್ಸಿಗೆ ಸರಿದೋರಿದ್ದು ಮಾಡಿ" ಎಂದಳು.

— ೨ —

ಮೂರ್ತಿಯು ಸೈನ್ಯಕ್ಕೆ ಸೇರಿಕೊಂಡು ಸಮರ ಸೇವೆ ಸಲ್ಲಿಸಿ ಒಂದು ವರ್ಷವಾಗಿತ್ತು. ಈ ಮಧ್ಯೆ ಹಲವಾರು ಪತ್ರಗಳನ್ನು ಹೆಂಡತಿಗೆ ಬರೆದಿದ್ದನು. ಆಮೇಲೆ ಹಠಾತ್ತಾಗಿ ಅವನಿಂದ ಪತ್ರಗಳೇ ಕೆಲವು ಕಾಲ ಬರದೇ ನಿಂತವು. ಪ್ರತಿದಿನ ರಾಜಿಯು ಅಂಚೆಯವನ ಬರುವಿಕೆ

ಯನ್ನು ಕಾಯುವಳು ; ಅವನು ಬಂದು ಕೊಟ್ಟ ಕಾಗದಗಳಲ್ಲಿ ತನಗೆ ಬೇಕಾದ್ದು ದೊರೆಯದೆ ನಿರಾಶಳಾಗುವಳು. ಹೀಗೆ ಒಂದೆರಡು ತಿಂಗಳು ಕಳೆಯಿತು. ಅವಳಿಗೆ ಜೀವನದಲ್ಲೇನೂ ಬೇಡವಾಯಿತು. ದಿನದಿನಕ್ಕೆ ಕೊರಗಿನಿಂದ ಕೃಶಳಾಗಲಾರಂಭಿಸಿದಳು. ತನ್ನ ಹೃದಯದ ದುಃಖವನ್ನು ಯಾರಲ್ಲಿ ತೋಡಿಕೊಳ್ಳಬೇಕೆಂಬುದೂ ಕೊನೆ ಕೊನೆಗೆ ಅವಳಿಗೆ ತೋಚದಾಯಿತು. ಒಂದು ದಿನ ಇದ್ದಕ್ಕಿದ್ದಂತೆ ಮೂರ್ತಿ ಯಿಂದ ಒಂದು ತಂತಿಯು ಅವರ ತಂದೆಗೆ ಬಂದಿತು. ಮೂರ್ತಿಯು ಮಾರನೆಯ ಬೆಳಿಗ್ಗೆ ಊರಿಗೆ ಹಿಂದಿರುಗಿ ಬರುವುದಾಗಿಯೂ, ತನ್ನನ್ನು ಸಮರ ಸೇವೆಯಿಂದ ಮುಕ್ತನನ್ನಾಗಿ ಮಾಡಿರುವರೆಂದೂ ಸುದ್ದಿ ಕೊಟ್ಟಿದ್ದ.

ಮಾರನೆಯ ಬೆಳಿಗ್ಗೆ ಸುಮಾರು ೧೦ ಘಂಟೆಯ ಸಮಯ. ಮೂರ್ತಿಯ ಮನೆಯಲ್ಲಿ ಒಂದು ದೊಡ್ಡ ಹಬ್ಬದೂಟದ ಸಿದ್ಧತೆಗಳೇ ಆಗುತ್ತಿದ್ದವು. ಮೂರ್ತಿ ಯುದ್ಧಭೂಮಿಯಿಂದ ಹಿಂದಿರುಗಿ ಬರುತ್ತಿರುವ ನೆಂಪಮೇಲೆ ಯಾರಿಗೆ ತಾನೇ ಸಂತೋಷವಾಗದಿರದು ? ರಾಜಿಯು ಹಿಡಿಸಲಾರದ ಆನಂದದಿಂದ ಹಿಗ್ಗಿಹೋಗಿದ್ದಳು. ಮನೆಗೆಲಸದಲ್ಲಿ ಅವಳಿಗಿಂದು ಎಂದೂ ಇಲ್ಲದ ಉತ್ಸಾಹ. ಮೂರ್ತಿಯು ಊರುಬಿಟ್ಟು ಹೋಗಿದ್ದಾಗ ಅವನ ಕೋಣೆಯು ಯಾವ ರೀತಿ ಇತ್ತೋ ಅದೇ ರೀತಿ ಕಾಣಬೇಕೆಂದು ಒಳಗಿನ ಸಾಮಾನುಗಳನ್ನೆಲ್ಲ ಅತ್ತಿಂದಿತ್ತ ಸ್ಥಾನ ಬದಲಾಯಿಸಿ ಒಪ್ಪವಾಗಿಟ್ಟಳು. ತನ್ನ ದೇಹಾಲಸ್ಯದ ಸುದ್ದಿ ಪತಿಗೆ ಪತ್ತೆಯಾಗಬಾರದೆಂದು ಅಲ್ಮಾರಿನಲ್ಲಿದ್ದ ಔಷಧಿ ಶೀಷೆಗಳನ್ನೆಲ್ಲಾ ತೆಗೆದು ಮನೆಯೊಳಗೆಲ್ಲೋ ಒಂದೆಡೆ ಮರೆಯಾಗಿಟ್ಟಳು. ಮುಖಾಲಂಕಾರಕ್ಕೆ ಮನಸ್ಸೇ ಕೊಡದಿದ್ದವಳು ಇಂದು ಅದರಲ್ಲಿ ಅಪೂರ್ವ ಆಸಕ್ತಿ ವಹಿಸಿದ್ದಳು. ನಿಮಿಷ ನಿಮಿಷಕ್ಕೂ ಕಿಟಕಿಯಲ್ಲಿ ತಲೆ ಹಾಕಿ ಬೀದಿಯ ಕಡೆ ನೋಡುವಷ್ಟು ಅವಳ ಚಿತ್ತವು ಚಂಚಲತೆಯಿಂದ ಕೂಡಿತ್ತು.

ಮನೆಯ ಮುಂದೆ ಒಂದು ' ಮಿಲಿಟರಿ ವ್ಯಾನು ' ಬಂದು ನಿಂತು ' ಹಾರ್ನ ' ಶಬ್ದ ಮಾಡಿತು. ರಾಜಿಯು ಎದೆ ಡವಡವನೆ ಹೊಡೆದು

ಕೊಳ್ಳಲಾರಂಭಿಸಿತು. ಅದುವರೆಗೆ ಕಿಟಕಿಯ ಕಡೆ ನೂರಾರುಬಾರಿ ತಲೆ ಹಾಕಿ ನೋಡಿದವಳಿಗೆ ಆಗ ಮತ್ತೊಮ್ಮೆ ನೋಡುವ ಧೈರ್ಯವಾಗಲಿಲ್ಲ. ಹೃದಯವು ಒತ್ತಿಯೊತ್ತಿ ಹೇಳಿದರೂ ಮನಸ್ಸು ಧೈರ್ಯತಾಳಲಿಲ್ಲ. ಕೊನೆಗೆ ಅಂಜುತ್ತಂಜುತ್ತ ಎದ್ದು ನಿಂತು ಕಿಟಕಿಯ ಮೂಲಕ ನೋಡಿದಳು. ಕಿಟ್ಟನೆ ಚೀರುವಹಾಗಾಯಿತು. ಮನದ ಉದ್ವೇಗವನ್ನು ತಡೆದುಕೊಂಡು ದಡದಡನೆ ಹೊರಕ್ಕೋಡಿ ಬಂದಳು. ಮೂರ್ತಿಯನ್ನಿಬ್ಬರು ಸಿಪಾಯಿಗಳು ಮೆಲ್ಲನೆ ಹಿಡಿದೆತ್ತಿಕೊಂಡು ಆವರಣದೊಳಕ್ಕೆ ಕರೆತಂದರು. ಹಿಂದೆಯೇ ಮತ್ತೊಬ್ಬ ಸಿಪಾಯಿಯು ಒಂದು 'ವೀಲ್‌ಚೇರ್' ತಳ್ಳಿಕೊಂಡು ಒಳಕ್ಕೆ ತಂದಿಟ್ಟ. ಅದರ ಮೇಲೆ ಮೂರ್ತಿಯನ್ನು ಆ ಸಿಪಾಯಿಗಳು ಕೂಡಿಸಿ ತಮ್ಮ ಗೌರವ ಸಲ್ಲಿಸಿ ಅವನಿಂದ ಆಪ್ಪಣೆ ಪಡೆದು ಹೊರಟರು.

ಅಲ್ಲಿಯವರೆಗೂ ಅವಡುಗಚ್ಚಿಕೊಂಡು ನೋಡುತ್ತ ನಿಂತಿದ್ದ ರಾಜಿಯು ತನ್ನ ಸುತ್ತಮುತ್ತಲಿದ್ದವರ ಪರಿವೆಯೇ ಇಲ್ಲದೆ, ಹೋಗಿ ಮೂರ್ತಿಯ ಕುರ್ಚಿಯಮೇಲೆ ಬಿದ್ದು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಮೂರ್ತಿಯ ಬಾಯಿಂದ 'ಯಾರು ?........ರಾಜಿ' ಎಂದೆರಡು ಶಬ್ದ ಹೊರಟಿತು.

ನಾಜಿ ವಿಮಾನದಾಳಿಗೆ ಮೂರ್ತಿಯು ಚಿಕಿತ್ಸೆ ನೀಡುತ್ತಿದ್ದ ಆಸ್ಪತ್ರೆಯೂ ಸಿಕ್ಕಿ ನೆಲಸಮವಾಗಿತ್ತು. ಆಗ ಅಳಿದುಳಿದವರಲ್ಲಿ ಮೂರ್ತಿಯೊಬ್ಬ. ಆದರೆ ಉಳಿದವರೆಲ್ಲ ಏನಾದರೊಂದು ಅಂಗವನ್ನು ಕಳೆದುಕೊಂಡಿದ್ದರು. ಮೂರ್ತಿಯ ಕಾಲುಗಳೂ, ಕಣ್ಣುಗಳೂ ಹೋಗಿಬಿಟ್ಟಿದ್ದವು.

ಆಕಾಂಕ್ಷೆಯೇನೋ ಹಿರಿದು ; ಆದರೆ ಅದರ ಸಾಫಲ್ಯಕ್ಕೆ ಮೂರ್ತಿಯು ನೀಡಿದ ಬೆಲೆಯು ಅದಕ್ಕೂ ಹಿರಿದು. ಡಾ|| ಮೂರ್ತಿಯು ಕ್ಯಾಪ್ಟನ್ ಮೂರ್ತಿಯಾಗಿಯೇ ಹಿಂದಿರುಗಿದ ; ಆದರೆ ಆ ಸಾಧನೆಗೆ ಅವನು ತೆತ್ತ ಬೆಲೆಯೆಷ್ಟು ?

\+ × × +

— ೩ —

ಕಾಶ್ಯಪರ್ ಮೂರ್ತಿಯನ್ನು ಅವನ 'ವೀಲ್ ಚೇರ್' ಸಮೇತ ಅವನ ಕೋಣೆಗೆ ತಳ್ಳಿಸಿದ ಮರುಕ್ಷಣವೇ ಅವನ ತಂದೆ ತಾಯಿಗಳು ತಮ್ಮ ಎದೆಯ ದುಃಖವಾರಿಸಿಕೊಳ್ಳಲು ಪ್ರತ್ಯೇಕ ಜಾಗಗಳನ್ನು ಅರೆಸಿಕೊಂಡು ಹೋದರು. ದೂರವಾದ ಅವರ ಕಾಲು ನಡಿಗೆಯ ಸಪ್ಪಳವನ್ನು ಆಲಿಸಿದ ಮೂರ್ತಿಯ ಕಿವಿಗೆ ರಾಜಿಯು ಅಬ್ಬರ ರಹಿತ ರೋದನೆಯು ಕೇಳಿಸದೆ ಹೋಗಲಿಲ್ಲ. ಕ್ರೋಧದಿಂದ ಅವನ ರಕ್ತವು ಕುದಿದು ರೊಯ್ಯನೆ ತಲೆಗೇರಿತು. ಅವನ ಬಾಯಿಂದ ಹೊರಟ ಧ್ವನಿ ಭಾರವಾಗಿತ್ತು.

"........ರಾಜಿ !........

"............" ರಾಜಿಯು ತನ್ನ ಳುವನ್ನು ಶ್ರಮಪಟ್ಟು ಹತೋಟಿಗೆ ತಂದುಕೊಂಡು ಮೂರ್ತಿಯ ಮಗ್ಗುಲಿಗೆ ಬಂದು ನಿಂತಳು.

ಮೂರ್ತಿಯು, "...ನೀನು ತಾನೆ ಇಲ್ಲೇಕೆ ನಿಂತಿರಬೇಕು; ನೀನೂ ಹೊರಡು...." ಎಂದ.

ರಾಜಿಯು ಅವನ ಮಾತಿನ ಅರ್ಥ ಅರಿತಳು. ಮಾರುತ್ತರ ಕೊಡದೆ ಅವನ ಕೈಯನ್ನೆತ್ತಿ ತನ್ನೆದೆಗೊತ್ತಿಕೊಳ್ಳಲು ಹೋದಳು. ಕೈಯ ಬಿಸಿಯನ್ನು ಕಂಡು ಚಕಿತಳಾದಳು. ಮೂರ್ತಿಯ ಹಣೆಯನ್ನು ಮುಟ್ಟಿ ನೋಡಿ, ಕಾತರಳಾಗಿ, "....ನಿಮಗೆ ಜ್ವರಾ ಬಂದಿದೆ; ಹೀಗೆ ಕೂತಿದ್ರೆ ಹ್ಯಾಗೆ? ಹಾಸಿಗೆ ಹಾಸ್ತೇನೆ; ಅದರ ಮೇಲೆ ಮಲಗಿ. ಮಾವನೋರಿಗೆ ತಿಳಿಸಿ ಡಾಕ್ಟರನ್ನು ಕರೆಸೋಣ"... ಎಂದಳು.

ಮೂರ್ತಿಯ ಹಣೆಗೆ ರಾಜಿಯ ಕೈ ಸೋಕುತ್ತಲೂ, ಮಂಜಿನ ಗಡ್ಡೆ ತೆಗೆದು ಅವನ ತಲೆಯಮೇಲಿಟ್ಟಂತೆ ಅವನಿಗೆ ಭಾಸವಾಯಿತು. ಅವನ ಕ್ರೋಧವು ಕುಗ್ಗಿತು. ಅವನಾಡಿದ ಮಾತಿಗೆ ಅವನಿಗೇ ಅಲ್ಪ

ಸ್ವಲ್ಪ ನಾಚಿಕೆಯಾಯಿತು. ರಾಜಿಯ ಕೈಯನ್ನು ಹಾಗೆಯೇ ಹಣೆ ಗೊತ್ತಿಕೊಂಡು,

"....ಇಲ್ಲಾ ರಾಜೀ! ಜ್ವರಾಗಿರಾ ಏನಿಲ್ಲ........ಮನಸ್ಸಿಗೇ ನಾದ್ರೂ ಬೇಸರವಾದಾಗ ನಿಶ್ಶಕ್ತಿಯಿಂದ ಹಣೇ ಕಾವು ಬರುತ್ತೆ ಅಷ್ಟೆ. ನೀನು ಹಾಗೇ ಸ್ವಲ್ಪ ಹೊತ್ತು ಹಣೆಯಮೇಲೆ ನಿನ್ನ ಕೈ ಇಟ್ಟರು. ಹಣೆಯ ಕಾವು ತಾನಾಗೇ ಇಳಿಯುತ್ತೆ....ಎಂದ.

ರಾಜಿಯು ಮೆಲ್ಲನೆ ಕೈ ಬಿಡಿಸಿಕೊಂಡು, "....ನೀವು ಸುಮ್ಮನೆ ಮಾತಾಡಬೇಡಿ; ಹಾಸಿಗೆ ಹಾಸ್ತೇನೆ; ಸ್ವಸ್ಥವಾಗಿ ಮಲಗಿ. ಡಾಕ್ಟರು ಬಂದು ನೋಡೋದು ನೋಡ್ಲಿ; ನಿಮಗೇನು ಅದ್ರಿಂದ ನಷ್ಟ.....?" ಎಂದು ಹಾಸಿಗೆಯನ್ನು ಹಾಸಿ, ಮೂರ್ತಿಯ 'ವೀಲ್ ಚೇರ'ನ್ನು ಹಾಸಿಗೆಯ ಮಗ್ಗುಲಿಗೆ ತಳ್ಳಿ, ನಿಲ್ಲಿಸಿ, ಮೂರ್ತಿಯ ಕೈ ಹಿಡಿದು ಮೆಲ್ಲನೆಬ್ಬಿಸಿ, ಅವನನ್ನು ಹಾಸಿಗೆಗೆ ವರ್ಗಾಯಿಸಿದಳು. ಮೂರ್ತಿಯು ರಾಜಿಯ ಸಹಾಯದಿಂದ ತನ್ನ ಸೈನ್ಯದ ಉಡುಪನ್ನು ಬಿಚ್ಚುತ್ತಾ, ... "ಅಲ್ವೇ ಹುಚ್ಚಿ! ನಾನೇನು ಡಾಕ್ಟರಲ್ವೆ? ನನಗೆ ಜ್ವರವಿದೆಯೋ ಇಲ್ವೋ ಅನ್ನೋದು ನಂಗೆ ಗೊತ್ತಾಗೋಕಿಂತ್ಲೂ ಮುಂಚೆ ನಿಂಗೇ ಗೊತ್ತಾಗಿರೋಹಾಗಿದೆ ನೋಡಿದ್ರೆ;

"ಹೌದು; ಗೊತ್ತಾದ್ರಿಂದ್ಲೇ ಹೇಳಿದ್ದು, ಡಾಕ್ಟ್ರು ಬರೋವರೂ ಸುಮ್ನೆ ಮಲಗೀಂತ."

"ಇಷ್ಟೆಲ್ಲಾ ಗೊತ್ತಿರೋಳು ಔಷಧೀನೂ ನೀನೇ ಕೊಟ್ಬಿಡು; ನನ್ನ ತಾನೇ ಯಾಕೆ ಕೇಳಬೇಕು? ಔಷಧಿ ಬೇಕೋ ಬೇಡ್ವೋ ಅಂತ?"

"ಡಾಕ್ಟ್ರು ಹೆಂಡ್ತಿಯಾದ್ದಕ್ಕೆ ನನ್ನ ಯೋಗ್ಯತೇಗೆ ಅಷ್ಟೂ ಬೇಡ್ವೆ? ಜ್ವರಾ ಇದ್ಯೋ ಇಲ್ವೋ ಅನ್ನೋದು ನಿಮಗೆಷ್ಟು ಗೊತ್ತಿದ್ಯೋ ನಂಗೂ ಅಷ್ಟೇ ಗೊತ್ತಿದೆ. ಸ್ವಲ್ಪ ನಿಂಬೇ ಹಣ್ಣಿನ ಪಾನಕ ಮಾಡಿ ತಂದ್ಕೊಡ್ತೇನೆ. ಕುಡ್ದು ಸ್ವಲ್ಪ ಸುಧಾರಿಸ್ಕೊಳ್ಳಿ" ಎಂದು ರಾಜಿಯು ಕೋಣೆಯಿಂದ ಹೊರಡಲನುವಾದಳು.

" ದೇವ್ರೇ ಗತಿ ! ಇಲ್ಕೇಳು ರಾಜಿ...."

" ನಿಧಾನವಾಗೆಲ್ಲಾ ನಿತ್ಕೊಂಡು ಕೇಳ್ತೀನೆ ಆಮೇಲೆ....ನೀವೀಗ ಡಾಕ್ಟರು ಬರೋವರ್ಗೂ ಸದ್ಯ ಸುಮ್ನೆ ಮಲಗಿದ್ರೆ ಸಾಕು.... ...ನಿಮ್ಮ ದಮ್ಮಯ್ಯ" ಎಂದು ರಾಜಿಯು ಅಲ್ಲಿ ನಿಲ್ಲದೆ ಅಡಿಗೆಮನೆಯಕಡೆಗೋಡಿದಳು. ಹೋಗುವಾಗ ತನ್ನ ಕಣ್ಣುಗಳನ್ನು ಸೆರಗಿನಿಂದ ಬೇಗನೆ ಒರೆಸಿಕೊಂಡಳು. ಮೂರ್ತಿಯು "........ಹಬ್ಬದ ಅಡಿಗೆ ವಾಸ್ನೆ ಬಂದು ಬಾಯಲ್ಲಿ ನೀರೂರಿಸ್ತಾಯಿದೆ ...ಇನ್ನು ನೀನು ಡಾಕ್ಟರನ್ನು ಕರೆಸಿ ಅದನ್ನ ತಿನ್ನೋದಕ್ಕೂ ತುಂಡ್ಹಾಕಿಸ್ಬಿಡು ಸರಿಹೋಗತ್ತೆ...." ಎಂದ. ಉತ್ತರ ಬಾರದ್ದನ್ನು ತಿಳಿದು ಅವನಿಗೆ ರಾಜಿಯು ಅಲ್ಲಿಲ್ಲದ್ದು ಮನವಟ್ಟಾಯಿತು. ಕಣ್ಣುಗಳು ಮತ್ತು ಕಾಲನ್ನು ಕಳೆದುಕೊಂಡು ಜಡವಾಗಿ ಬಿದ್ದಿರುವ ತನ್ನ ಸ್ಥಿತಿಯಬಗ್ಗೆ ತನಗೇ ಕ್ರೋಧವಿನ್ಮಡಿಸಿತು. ಹಲ್ಲು ಮುಡಿಕಚ್ಚಿದ. ಹಣೆಯ ನರಗಳುಬ್ಬಿದವು.

× × × ×

ಅಂದೆಲ್ಲ ಮೂರ್ತಿಯನ್ನು ನೋಡಿಕೊಂಡು ಹೋಗುವ ಕುತೂಹಲದಿಂದ ಮನೆಗೆ ಬಂದ ಬಂಧು, ಮಿತ್ರರೆಲ್ಲ ಅವನ ಬಗ್ಗೆ ತಮ್ಮ ಸಾಂಪ್ರದಾಯಿಕ ಸಹಾನುಭೂತಿಯನ್ನು ಅವನ ತಂದೆತಾಯಿಗಳ ಬಳಿ ವ್ಯಕ್ತಪಡಿಸುತ್ತಿದ್ದುದನ್ನು ಅವನು ಕೇಳಿ ಕೇಳಿ ಕೊರಗಿದ. ಅವರ ಮರುಕದ ಮಾತುಗಳಿಗೆ ಅವನ ಮೈ ಉರಿಯಿತು. ಅವರ ಕಪಟ ವಚನಗಳನ್ನು ಕೇಳಲಾರದ ರೋಷ ಅವನಿಗೆ ಹುಚ್ಚು ಹಿಡಿಸುತ್ತಿತ್ತು. ಅವರನ್ನೆಲ್ಲಾ ಒದ್ದು ಓಡಿಸಿಬಿಡಲು ಮನಸ್ಸು ಹಾತೊರೆಯುತ್ತಿತ್ತು. ಆದರೆ........ಮಧ್ಯೆ ಮಧ್ಯೆ ಶಾಂತಿದೇವಿಯ ಹಸ್ತ ಅವನ ಹಣೆಯ ಮೇಲೆ ವಿರಮಿಸಿ ನಿಲ್ಲುತ್ತಿತ್ತು. ಅದರ ಹಿತಕರ ಸ್ಪರ್ಶದಿಂದ ಅವನ ಮನಸ್ಸನ್ನಾವರಿಸಿದ್ದ ಅಗ್ನಿ, ತನ್ನಂತೆ ಅಂಗವಿಹೀನರಾಗದೆ ನೆಟ್ಟಗಿದ್ದವರನ್ನೆಲ್ಲಾ ಸುಟ್ಟು ಭಸ್ಮ ಮಾಡಿಬಿಡಲು ಹಾತೊರೆಯುತ್ತಿದ್ದ ಆ ಅಗ್ನಿ ಅಲ್ಪಮಾತ್ರ ಅಣಗುತ್ತಿತ್ತು. ಕಾಡ್ಕಿಚ್ಚು ಕಿಂಚಿನ್ಮಾತ್ರ ಕಟ್ಟಿಗೊಳ

ಪಟ್ಟಿತ್ತು. ರಾಜಿಯು ಅವನ ತಲೆಯಬಳಿ ಮೌನವಾಗಿ ಕುಳಿತು ಅವನ ಹಣೆಯಮೇಲೆ ತಣ್ಣೀರಿನ ಬಟ್ಟೆ ಒತ್ತುತ್ತಿದ್ದಳು.

× × × ×

ಮೂರ್ತಿಯು ಹಿಂದಿರುಗುವ ಸಂತೋಷದಲ್ಲಿ ಅವನ ತಂದೆ ತಾಯಿಗಳು ಏರ್ಪಡಿಸಿದ್ದ ಔತಣದೂಟಕ್ಕೆ ಆಹ್ವಾನಿಸಲ್ಪಟ್ಟಿದ್ದ ಬಂಧುಗಳ ಪೈಕಿ ಕೆಲವರು ಸಮರ ಭೂಮಿಯ ವಿಚಾರ ವೈಖರಿಯನ್ನು ಕೇಳಿ ತಿಳಿದುಕೊಳ್ಳುವ ಕುತೂಹಲದಿಂದ ಬಂದಿದ್ದರು. ಕೆಲವರು ವಿದೇಶೀಯ ಮಹಿಳಾ ರಂಗಗಳಲ್ಲಿ ಸೈನಿಕರ ಸ್ವೇಚ್ಛಾವರ್ತನೆಗಳ ಸ್ವಾರಸ್ಯ ಕತೆಗಳನ್ನು ಕೇಳಿ ಪುಲಕಿತರಾಗುವ ಎಳೆಮನಸ್ಸಿನಿಂದ ಬಂದಿದ್ದರು. ಮತ್ತೆ ಕೆಲವರು, ಮೂರ್ತಿಯು ಪರದೇಶದಲ್ಲಿ ತನ್ನ ವಿರಾಮಕಾಲವನ್ನು ಯಾವ ಬಗೆಯ ವಿಲಾಸಕೇಳಿಗಳಲ್ಲಿ ಕಳೆದ ನೆಂಬುದರ ರಹಸ್ಯವನ್ನು ಭೇದಿಸಲು ಬದ್ಧಕಂಕಣರಾಗಿ ಬಂದಿದ್ದರು. ಮತ್ತೆ ಕೆಲವರು ಕೇವಲ ಮೃಷ್ಟಾನ್ನ ಭೋಜನ ಪಡೆಯುವ ಉತ್ಸುಕತೆಯಿಂದಲೇ ಬಂದಿದ್ದರು. ಅಂತೂ ಎಲ್ಲರೂ, ಊಟಮಾಡುವ ಆಸೆಯನ್ನೆ ಇಟ್ಟುಕೊಂಡಿದ್ದರೂ, ಮೂರ್ತಿಯ ಕಣ್ಣು, ಕಾಲು ಕಳೆದುಹೋದ ಬಗ್ಗೆ ಕನಿಷ್ಟಪಕ್ಷ ನಾಲ್ಕಾದರೂ ಕನಿಕರದ ಮಾತನ್ನಾಡಿ, ಅವನು ಆ ಅಂಗಗಳನ್ನು ಹೇಗೆ ಕಳೆದುಕೊಂಡನೆಂಬ ಕತೆಯನ್ನು ಕೇಳದೆ ಹೋದರೆ 'ಊಟಕ್ಕಾಗಿಯೇ ಬಂದ ಕಟುಕ'ರೆಂಬ ಕೀರ್ತಿಗೆಲ್ಲಿ ಪಾತ್ರರಾಗುವೆವೋ ಎಂಬ ಸಾಂಪ್ರದಾಯಿಕ ಭೀತಿಯಿಂದ ಪ್ರತಿಯೊಬ್ಬರೂ ಮೂರ್ತಿಯ ಕೋಣೆಯ ಬಾಗಿಲಿನಲ್ಲಿ ತಲೆಹಾಕಿ, ತಮ್ಮ ಗಿಣಿಪಾಠವೊಪ್ಪಿಸಿ, ತಲೆಯಲ್ಲಾಡಿಸಿ, ಲೊಚಗುಟ್ಟುತ್ತ ಊಟದ ಕೋಣೆಗೆ ಕಾಲು ಹಾಕುತ್ತಿದ್ದರು.

ಊಟವೆಲ್ಲಾ ಸಾಂಗೋಪಾಂಗವಾಗಿ ಜರುಗುವವರೆಗೆ ಅವರ ಚರ್ಚೆಗೆ, ಅಭಿಪ್ರಾಯ ಪ್ರಕಟಣೆಗೆ ಸಿಕ್ಕಿದ್ದ ವಿಚಾರವೆಲ್ಲ ಸಂಗ್ರಾಮದ ಸತ್ಯಾಸತ್ಯ ಸುದ್ದಿಗಳು; ಸಹಸ್ರಾರು ಮಂದಿಯ ಸಾವು-ನೋವುಗಳು;

ಸೈನ್ಯಗಳ ಚಲನ-ವಲನದ ಆಗು-ಹೋಗುಗಳು ; ಜಯಾಪಜಯಗಳು; ಸ್ಥಳೀಯ ಸೈನಿಕರು ನಿರಂಕುಶರಾಗಿ ಸ್ತ್ರೀಯರ ಮೇಲೆ ನಡೆಸುತ್ತಿರುವ ಅತ್ಯಾಚಾರ, ಇವೇ. ಅಂತೂ ಒಂದೊಂದು ತೂಕವಾದ ಮಾತಿಗೂ ಒಂದೊಂದು ತೂಕವಾದ ತುತ್ತೇ ಒಳಕ್ಕಿಳಿಯುತ್ತಿತ್ತು. ಯಾವ ಮಹತ್ವದ ಮಾತೂ, ಭಕ್ಷ್ಯ ಭೋಜ್ಯಗಳನ್ನು ತಿನ್ನುವುದರಲ್ಲಿ ಪರಸ್ಪರ ಉಪಚಾರಕ್ಕೆ ಕಿಂಚಿತ್ತಾದರೂ ಕೊರತೆಯನ್ನುಂಟುಮಾಡಲಿಲ್ಲ. ರೇಷ್ನ ಕಾಲವಾದರೆ ತಾನೇ ಏನು ?

ಇವರ ಸಂಭಾಷಣೆಯೆಲ್ಲ, ಕೋಣೆಯಲ್ಲಿ ಮಲಗಿದ್ದ ಮೂರ್ತಿಯ ಕಿವಿಗೆ ಚೆನ್ನಾಗಿ ಬೀಳುತ್ತಿತ್ತು. ಅಧಿಕಾರಯುತವಾಗಿ ಅವರ ಮುಖ ದಿಂದ ಹೊರಬೀಳುತ್ತಿದ್ದ ಅಪಕ್ವ ಜ್ಞಾನವು ಮೂರ್ತಿಯ ಮೈ ಉರಿಸುತ್ತಿತ್ತು. ಅತಿಥಿಗಳ ಸಂಭಾಷಣೆಯ ಸರಣಿಯು ತನ್ನ ಪತಿಯ ಅಸ್ವಸ್ಥತೆಯನ್ನು ಅಧಿಕಗೊಳಿಸುವುದರೊಂದಿಗೆ, ಅವನ ಮನ ನೋಯಿಸುವಂತಹುದೂ ಆಗುತ್ತಿದೆಯೆಂಬುದನ್ನರಿತ ರಾಜಿಯು ಅಧೀರಳಾದಳು. ಮೂರ್ತಿಯು ಬಹುಕಾಲ ಮೌನದಿಂದಿರಲಾರ ದವನಾದ.

"....ಯುದ್ಧ ಭೂಮಿ ಮುಖಾನೇ ಕಾಣದ ಈ ಮಂಕುಗಳು ಮನಸ್ಸಿಗೆ ಬಂದ ಹಾಗೆ ಮಾತಾಡ್ತಿವೆ. ಇವರಿಲ್ಲಿ ಸುಖವಾಗಿರೋ ಕೋಸ್ಕರ ಅಲ್ಲಿ ಸೈನಿಕರು ಹೇಗೆ ಜೀವ ಕೈಲಿಟ್ಕೊಂಡು ಹೋರಾಡ್ತಾ ಇದ್ದಾರೆ; ಅವರ ಕಷ್ಟ-ಸುಖಗಳೇನೂಂತನ್ನೋದ್ನ ಸ್ವಲ್ಪಾನೂ ತಿಳ್ಕೊಳ್ದೆ ಕಿರಚ್ತಿದ್ದಾರೆ........ಶುದ್ಧ ಉಂಡಾಡಿ ಭಟ್ರು........ಎಂದ. ರಾಜಿಯು " ಅವರೇನ್ಬೇಕಾದ್ರೂ ಮಾತಾಡ್ಕೊಂಡು ಹೋಗಲಿ ; ನಿಮ್ಮ ಪಾಡಿಗೆ ನೀವು ಒಂದೂ ಕಿವೀಗೆ ಹಾಕ್ಕೊಳ್ದೆ ಶಾಂತವಾಗಿರಬಾರ್ದೇನು? ........ಸದ್ಯ ಊಟವಾದಮೇಲೆ ನಿಮ್ಮ ಹತ್ರ ಬರದೇ ಹಾಗೇ ತೊಲಗಿ ಹೋದ್ರೆ ಸಾಕು " ಎಂದಳು.

" ಬಂದರೇನಂತೆ........ಅಗತ್ಯವಾಗಿ ಬರಲೇಳು !"

"ಸರಿ! ಬಂದು ಸಿಕ್ಕಾಪಟ್ಟೆ ಕೆಲಸಕ್ಕೆ ಬಾರದ್ದೆಲ್ಲಾ ಕೇಳ್ತಾ ಪ್ರಾಣಾತೆಗೀತಾ ಕೂತ್ಕೊಳ್ಳೋಕೆ........ಸದ್ಯ ಏನೂ ಬೇಡಾ........"

"ಏಕೆ, ಏನುಬೇಕಾದ್ರೂ ಕೇಳಲೇಳು....ಯುದ್ಧದ ಸ್ವರೂಪಾ ನಾದ್ರೂ ಕೇಳಿ ತಿಳಕೊಳ್ಲಿ....ಹೇಳೋಕೆ ನಾನೂ ಸಿದ್ಧವಾಗಿದ್ದೇನೆ.... ಅವರ ಕಳ್ಳ ಕನಿಕರ ನಂಗೇನೂ ಬೇಕಾಗಿಲ್ಲ; ನನ್ನ ಕಣ್ಣು, ಕಾಲು ಹೋದ್ದು ನನಗೇನೂ ದುಃಖವಿಲ್ಲಾನ್ನೋದಾದ್ರೂ ಅವರ ಮಂಡೇಗೆ ಹಿಡೀಲಿ....'

"........ಮಾತಾಡಿ ಮಾತಾಡಿ ಜ್ವರ ಹೆಚ್ಮಾಡ್ಕೋಬೇಕೂಂತ ನಿಮಗಾಸೇಂತ ಕಾಣುತ್ತೆ....ನಿಮ್ಮಷ್ಟಕ್ಕೆ ನೀವು ಸುಮ್ನೆ ಮಲಕ್ಕೋ ಬಾರ್ದೆ? ..... ..ನಾನು ಎದ್ಹೋಗಿ ಅತ್ತೆಯವರಿಗ್ಹೇಳಿ ಅವರ್‍ಯಾರೂ ಇತ್ಕಡೆ ಸುಳೀದ್ಹಾಗೆ ಮಾಡ್ತೇನೆ... 'ಜ್ವರ ಬಂದಿದೆ; ತೊಂದ್ರೆ ಕೊಡ್ಬೇಡೀ'ಂತ ಅವರು ಹೇಳಿ ರವಾನೆ ಹಾಕ್ತಾರೆ...."

"........ಇಲ್ಲಾ ರಾಜೀ! ....ನೀನು ಯಾರ್ನೂ ತಡೀಬೇಡ.... ನನಗಿದ್ರಿಂದ ಸ್ವಲ್ಪ ಶ್ರಮಾ ಆದ್ರೂ ಪರವಾಯಿಲ್ಲ; ಈ ಜನಗಳ ತಲೇಗೊಂದು ಸ್ವಲ್ಪ ತಿಳಿವಳಿಕೇನಾದ್ರೂ ತುಂಬಿದರೇನೆ ನನಗೆ ತೃಪ್ತಿ ಸೈನಿಕರ ಬಾಳೂ ಅಂದ್ರೆ ಅವರಿಗಿರೋ ತಾತ್ಸಾರ ತೊಲಗಬೇಕು.... ಮನೇಲಿ ಎಲೇಮುಂದೆ ಕೂತ್ಕೊಂಡು ಬೋಂಡಾ ನ೦ಗೋಕೂ, ಅಲ್ಲಿ 'ನುಗ್ಗಿ ನಿಲ್ಬೇಕೂ ಇಲ್ವೇ ಸಾಯ್ಬೇಕೂ'ಂತ ಬಂದೂಕು ಹಿಡಿಯೋಕೂ ವ್ಯತ್ಯಾಸ್ವಿದೆ........ಬರಲಿ ಸುಮ್ನಿರು ..." ಎಂದ.

ಆ ವೇಳೆಗೆ ಅತಿಥಿಗಳೆಲ್ಲರೂ ಊಟಮಾಡಿ ಕೈತೊಳೆದಾಗಿತ್ತು. ತಾಂಬೂಲವನ್ನು ಸವಿಯಲು ಕೂಡುವುದಕ್ಕೆ ನಡುಮನೆಯಲ್ಲಿ ಜಮಖಾನೆ ಹಾಸಿ, ಎಲ್ಲವನ್ನು ಅಣಿಯಾಗಿಟ್ಟಿದ್ದರೂ, ಅವರಲ್ಲೊಬ್ಬ ಬೃಹಸ್ಪತಿ ಅಡಿಕೆಲೆಯ ತಟ್ಟೆಯನ್ನು ಕೈಗೆತ್ತಿಕೊಂಡು 'ಬನ್ರೀ! ಎಲ್ಲಾ ಮೂರ್ತಿಯ ಕೋಣೇಲೇ ಕೂತು ಮಾತಾಡ್ತಾ ಅಡಿಕೆಲೆ ಹಾಕ್ಕೊಂಡ್ರಾಯ್ತು! ಯುದ್ಧಭೂಮಿ ಸಮಾಚಾರ ಸ್ವಾರಸ್ಯ

ವಾಗಿರುತ್ತೆ !' ಎಂದು ಹೊರಟ. ಕುರಿಮಂದೆ ಹಿಂಬಾಲಿಸಿ ಮೂರ್ತಿಯ ಕೋಣೆಗೆ ಮುತ್ತಿಗೆಹಾಕಿತು. ರಾಜಿಯು ನಿರುಪಾಯಳಾಗಿ ಕೋಣೆ ಯಿಂದ ನುಣುಚಿಕೊಂಡಳು. ಹೊರಗೆ ಬಂದವಳು, ಅತಿಥಿಗಳ ಸಂಭಾಷಣೆಯ ವಕ್ರಗತಿಯನ್ನು ಕೇಳುತ್ತ ಏನೂ ಮಾಡಲಾರದವಳಾಗಿ ನಿಂತಳು.

ಮೂರ್ತಿಯ ಕೋಣೆಯನ್ನು ಮುತ್ತಿದ ಮಿತ್ರರೆಲ್ಲ ಮೊದ ಮೊದಲು ಪ್ರಶ್ನಾವಳಿಯ ಮಳೆಗರೆಯಲು ಸಿದ್ಧರಾಗಿದ್ದರೂ ಮುಖ್ಯ ವಾದ ಪ್ರಸ್ತಾಪವನ್ನೆತ್ತಲು ಯಾರೂ ಮನಸ್ಸು ಮಾಡಲಿಲ್ಲ. ಕೊನೆ ಗೊಬ್ಬ, 'ಏನಯ್ಯಾ ಮೂರ್ತಿ! ಯುದ್ಧಭೂಮಿಯಿಂದ ನಿಜವಾದ ವಿಚಾರ ನಮಗೇನೂ ಸರಿಯಾಗಿ ಬರೊಲ್ಲ; ನೀನಾದರೂ ಹೇಳು' ಎಂದ.

ಮೂರ್ತಿಯು 'ನಾನೇನು ಹೇಳಲಿ.......ಎಲ್ಲಾ ಯುದ್ಧಗಳ ಹಾಗೇನೇ ಇದೂನೂ! ಹೊಡೆದಾಡೋರು ಹೊಡೆದಾಡ್ತಲೇ ಇದ್ದಾರೆ; ಸಾಯೋರು ಸಾಯ್ತಾಲೇ ಇದಾರೆ; ಇಲ್ಲಿ ಮಾತಿನ ಮಲ್ಲರಾಗಿ ಕೂತಿರೋರು ಕೂತೇ ಇದಾರೆ.'

'ಓಹೊಹೊ! ಏನಪ್ಪಾ? ನಾವೆಲ್ಲಾ ಮಾತಿನ ಮಲ್ಲರಾಗ್ಬಿಟ್ವೊ? ಕೆಲವ್ರು ಅಲ್ಹೋಗಿ ಹೊಡೆದಾಡಿದ್ರೆ, ಇನ್ನು ಕೆಲವ್ರು ಹೊಡ್ದಾಡೋರಿಗೆ ಇಲ್ಲಿಂದ ಕುಮ್ಮಕ್ಕು ಕೊಡ್ತಾ ಇರಬಹುದು' ಎಂದೊಬ್ಬರು ಅಂದರು. ಮತ್ತೊಬ್ಬರು "ಇರಬಹುದು ? ಏನ್ರೀ-ಇದ್ದೀವೀಂತನ್ನಿ. ಅಲ್ಲಿ ಹೋಗಿ ಕಾದಾಡೋರಿಗೆ ಊಟ ಉಪಚಾರ, ಬಟ್ಟೆಬರೇಗೆ, ಔಷಧಿ-ಪಥ್ಯಕ್ಕೆ ಎಲ್ಲಾನೂ ಅನುವಾಗಿ ಒದಗ್ಸೋಕೆ ನಾವಿಲ್ಲಿ ದುಡ್ಡು ದುಗ್ಗಾಣಿ ಕೊಟ್ರೆತಾನೆ ರಥ ಜರಗೋದು ಮುಂದಕ್ಕೆ?....' ಎಂದರು.

ಮೂರ್ತಿಗೇಕೊ ರೇಗಿತು. ಏನೋ ಸ್ವಲ್ಪ ಒರಟಾಗಿಯೇ ಇವರಿಗೆ ಉತ್ತರ ಕೊಡಬೇಕೆಂದು ಕೆಲವು ಮಾತುಗಳು ಬಾಯಿಗೆ

ಬಂದವು. ಆದರೆ ಅಷ್ಟರಲ್ಲೇ ಅವನು ಅದನ್ನು ನುಂಗಿಕೊಂಡು,....
"ಏನು ನೀವು ಮಹಾ ಹಣ ತೆತ್ತುಬಿಟ್ಟಿರೋದು? ಅಲ್ಲಿ ಸೈನಿಕರು ಹೆಜ್ಜೆ ಹೆಜ್ಜೇಗೂ ಪ್ರಾಣತೆತ್ತು ಶತ್ರುಗಳನ್ನ ಹಿಂದಕ್ಕೋಡ್ಸೋ ಇಲ್ಲಾ ತಡ್ದೋ ನಿಲ್ಲಿಸಿದರೆ ತಾನೇ ಇಲ್ಲಿ ನೀವು ಸುಖವಾಗಿ ಚಕ್ಕಂದಾ ಆಡ್ತಾ, ನಗ್ತಾ ನಲೀತಾ ಪೊಗದಸ್ತಾಗಿ ಕವಳ ಕತ್ತರಿಸೋಕಾಗೋದು? ಹಾಗೆ ನಾವಲ್ಲಿ ನಿಮಗೋಸ್ಕರ ಜೀವ ಕೊಡೋಕೂ ಹೇಸದೆ 'ತ್ಯಾಗ–ತ್ಯಾಗ' ಅಂತ ಮಂತ್ರ ಜಪಿಸಬೇಕು ; ನೀವಿಲ್ಲಿ 'ಯಾರುಪಕಾರಕ್ಕೆ ಇವರೆಲ್ಲ ಹೋಗಿ ಜೀವ ಬಲಿಕೊಡ್ತಾ ಇದ್ದಾರೆ ; ಕೊಡ್ತಾ ಇಲ್ವೇನು ನಾವು ನಮ್ಮ ಹಣಾನ?" ಅಂತಾ ಹಿಯ್ಯಾಳಿಸ್ತಾ ಇರಬೇಕು. ನೀವು ಕೊಟ್ಟಿರೋ ಅಥವಾ ಕೊಡ್ತೀವೀಂತಿರೊ ಪುಡಿಕಾಸು ಯುದ್ಧಭೂಮೀಲಿ ಸಾಯೋ ಸೈನಿಕನ ಜೀವಕ್ಕೆ ಬೆಲೆ ಅಲ್ಲ........ನೀವು ಊಟಾ-ಉಪಚಾರಕ್ಕೆ ಬಟ್ಟೆ-ಬರೇಗೆ, ಔಷಧಿ-ಪಥ್ಯಕ್ಕೆ ದುಡ್ಡು ಒದಗಿಸಿಬಿಟ್ಟಾಕ್ಷಣಕ್ಕೇ ಒಬ್ಬ ಮನುಷ್ಯ ತನ್ನ ಜೀವ ನಿಮಗೋಸ್ಕರ ಬಲಿಕೊಟ್ಬಿಡಬೇಕೂಂತೇನಾದ್ರೂ ಶಾಸ್ತ್ರವೇನು? ಅವನಿಗೇನು ಅಂಥಾ ದಾಕ್ಷಿಣ್ಯ ಶ್ರಾದ್ಧದ ಹಂಗಿರೋದು?—

"........ ಇಲ್ಲಪ್ಪಾ ........ ಮಹರಾಯ! ನಮ್ಮನ್ನುದ್ಧಾರಾ ಮಾಡೋಕೇ ಸೈನಿಕನಾಗೋದು ಪ್ರತಿಯೊಬ್ನೂವೆ ; ನಮ್ಮ ಉದ್ಧಾರಕ್ಕೇ ಯುದ್ಧಗಳಾಗೋದೂನೂವೆ ; ನಮ್ಮುದ್ಧಾರಕ್ಕೇ ಈ ಸೈನಿಕರೆಲ್ಲಾ ಪ್ರಾಣಾಬಿಡೋದೂನೂವೆ!. .......... ನಾವು ತಿಳೀದೋರು ; ಒಪ್ಕೊಂಡ್ವಿ ಕಣಯ್ಯ........ಅಲ್ಲಿಗೆ ತೃಪ್ತಿಯೋ ನಿನಗೆ" ಎಂದರು, ಮೂರ್ತಿಯ ಸಮೀಪ ಬಂಧುಗಳೊಬ್ಬರು. ಮೂರ್ತಿಯು, ಕೊನೆಯ ಮಾತು ತಮ್ಮದೇ ಆಗಿರಬೇಕೆಂದು ನಂಬಿರುವ ಜನದ ಗುಂಪಿಗೆ ಸೇರಿದವನು. ಆದರೆ ಅವನೆದುರಾಳಿಗೂ ಸೋಲುವ ಮನಸ್ಸಿರಲಿಲ್ಲ. ಇಬ್ಬರಿಗೂ ಹತ್ತಿತು, ಮಾತಿಗೆ ಮಾತು. ಮೂರ್ತಿಯು 'ಅಷ್ಟಲ್ದೇ ಮತ್ತಿನ್ನೇನು? ಸೈನಿಕರು ಹಿಮ್ಮೆಟ್ಟಿ, ಶತ್ರುಗಳು ಮುಂದೆ ನುಗ್ಗಿ

ಬರೋಕೆ ಜಾಗ ಮಾಡಿಕೊಡಲಿ ಆಗ ನೋಡೋಣ, ನೀವೆಲ್ಲಾ ಎಲ್ಲಿರ್ತೀರೀಂತ; ಈಗ ಉದ್ದುದ್ದವಾಗಿ ಮಾತಾಡ್ತಿರೋ ಮಹಾ ಪುರುಷರೆಲ್ಲ ಗಂಟು ಮೂಟೆ ಕಟ್ಕೊಂಡು ಜೀವ ಉಳಿದರೆ ಸಾಕೂಂತ ದಿಕ್ಕಾಪಾಲಾಗಿ ಓಡ್ತಿರ್ತೀರಿ ..." ಎಂದ.

"ಹೌದಯ್ಯಾ .... ನಾವೆಲ್ಲಾ ಬರೀ ಮಾತಿನೋರೇನಪ್ಪ.... ಅವರೆಲ್ಲಾ ಧೀರರು-ತ್ಯಾಗಿಗಳು. ಒಪ್ಕೊಳ್ಳೋಣ. ಆದರೆ ಈ ಸೈನಿಕರಿಗೆಲ್ಲಾ ಸಂಬಳಾ ಯಾರಪ್ಪ ಒದಗ್ಸೋರು? ನಾವ್ತಾನೆ? ನಾವೆಲ್ಲಾ ಇಪ್ಪತ್ತೆಂಟು ರೀತೀಲಿ ಕೊಟ್ಟ ಕಂದಾಯದ ಹಣದಿಂದ್ಲೇ ತಾನೇ ಆ ಸೈನಿಕರಿಗೆ ಎಲ್ಲಾನೂ ಒದಗ್ಸೋಕೆ ಹಣ ಹಂಚ್ತಿರೋದು ?

"ಹೌದು........ಆದರೆ .......?"

"ಸ್ವಲ್ಪ ತಡಿ ; ನೀನೇ ಇಷ್ಟು ಹೊತ್ತೂ ಮಾತಾಡ್ದೆ ; ನನಗೂ ನಾಲ್ಕು ಮಾತಾಡೋಕೆ ಪುರಸತ್ತು ಕೊಡು. ನಮ್ಮ ರಕ್ಷಣೇಗೆ, ನಮ್ಮ ದೇಶದ ರಕ್ಷಣೇಗೇಂತ ನಮ್ಮಿಂದ ವಸೂಲಾದ ಹಣದಿಂದ ಸಾಕಲ್ಪಟ್ಟ ಸೈನಿಕರು ನಮ್ಮ ಶತ್ರುಗಳ ಮೇಲೆ ತಮ್ಮ ಪರಾಕ್ರಮ ತೋರಿಸ್ಬೇಕೋ ಅಥವಾ ನಮ್ಮ ಮನೆ ಹೆಣ್ಣುಮಕ್ಕಳ ಮೇಲೆ ಅವರ ಪೌರುಷ ತೋರಿಸೋದರಲ್ಲೇ ನಮ್ಮ ಋಣ ತೀರಸ್ಬೇಕೊ?....ದಿನ ಬೆಳಗಾದ್ರೆ ಆ ರಸ್ತೇಲಿ ಸಿಪಾಯಿಗಳು ಒಬ್ಬ ಹೆಂಗಸನ್ನ ಹಿಡಕೊಂಡ್ರು; ಈ ರಸ್ತೇಲಿ ಒಬ್ಬ ಹೆಂಗಸಿನ ಮೇಲೆ ಹರಾಕಿರಿಕೆಯಾಗಿ ಕೈ ಹಾಕಿದರು; ಇನ್ನೊಂದ್ಕಡೆ ಒಬ್ಬ ಹುಡುಗೀನ ಹಿಂಸೆ ಮಾಡಿದ್ರು. ಆ ಹಳ್ಳೀ ರೈತರ ತೋಟಕ್ಕೆ ನುಗ್ಗಿ ಹೊಡೆದಾಡಿದ್ರು.... ಈ ಪುಣ್ಯ ಚರಿತ್ರೇನೇಯೆ ನಮ್ಕಿವೀಗೆ ಬೀಳ್ತಿರೋದು. ದೇಶೋದ್ಧಾರಕ್ಕೆ ಹೊರಟೆರೋ ನಿಮ್ಮೀ ಸೈನಿಕರ ಕಥೇ ಕೇಳ್ದೀನಪ್ಪಾ....? ಈ ಸೈನಿಕರೆಲ್ಲಾ ನಮ್ಮೋರೆ..ಇವರೀ ನಲಿದಾಟಕ್ಕೆ ನಾವು ಹೊಟ್ಟೆ-ಬಟ್ಟೆ ಕಟ್ಟಿ ದುಡ್ಸುರೀಬೇಕು....ಇಷ್ಟೇ ಸಾಲದೂಂತ ಮತ್ತೆ ನಮ್ಮಿಂದಲೇ 'ವಾರ್‌ಫಂಡ್'ಗೇಂತ ನಂಜೀವ ಹಿಂಡಿ ಹಣ ಸುಲ್ಕೊಳ್ಳೋದು....! ಕೊನೇಗೆ ನಾವೇ ನಮ್ಮ ಸೈನಿಕರ ಹಿಂಸೇಗೆ ಸಿಕ್ಕಿ ಕಣ್ಣು ಕಣ್ಣು ಬಿಡಬೇಕು. ನಮ್ಮದು ತ್ಯಾಗವಲ್ಲ.... ಅವರದೇ ತ್ಯಾಗ....ಬಹಳ ಚೆನ್ನಾಗಿದೆಯಯ್ಯಾ........

"ಹೆಂಗಸರ ಮೇಲೆ ಕೈ ಮಾಡ್ತಾರೇಂದ್ರೇನು ಎಲ್ಲಾ ಸೈನಿಕರೂ ಹಾಗೇ ಇದಾರೇಂತ್ಲೇನು? ಊರು ಅಂದಮೇಲೆ ಹೊಲಗೇರಿ ಇದ್ದೇ ಇರುತ್ತೆ; ಸೈನಿಕರಲ್ಲಿ ಒಳ್ಳೇರೂ ಇದ್ದಾರೆ ಪೋಲೀಗಳೂ ಇರ್ತಾರೆ. ಪ್ರತಿಯೊಬ್ಬನ ಮೇಲೂ ಒಬ್ಬೊಬ್ಬನ್ನ ಕಾವಲಿಗೆ ಹಾಕೋಕಾಗುತ್ತೇನು? ಕೆಟ್ಟತನಕ್ಕೆ ಕೈಹಾಕಿದ ಸೈನಿಕನ್ನ ಹೆಡೆಮುರಿ ಕಟ್ಟಿ ಹಿಡಿದು ಪೋಲೀಸಿನವರಿಗೊಪ್ಸಿ; ಅವರು ಸೈನ್ಯಾಧಿಕಾರಿಗೊಪ್ಪಿಸ್ತಾರೆ; ಅಲ್ಲಿ ಅವನಿಗೆ ಶಿಕ್ಷೆ ಆಗೇ ಆಗತ್ತೆ. ನಿಮಗಿದು ಕೈಲಿ ಹರೀದೆ ಸೈನಿಕರ್ನೆಲ್ಲಾ ಬೈದು, ನಾವು ಯಾವ ಸಹಾಯಾನೂ ಮಾಡೊಲ್ಲಾಂತ ಕೂತ್ಕೊಂಡ್ರೆ ನಾಳೆ ಶತ್ರುಗಳು ಬಂದು ಈ ಸೈನಿಕರಿಗಿಂತ ನಾವಿರ ಪಾಲು ಹೆಚ್ಚಾಗಿ ನಿಮ್ಮ ಹೆಂಗಸರು ಮಕ್ಕಳ ಮಾನ ತೆಗೀತಾರೆ; ನಿಮಗದೇ ಹಿತಾಂತ ಕಾಣುತ್ತೆ; ಮುಂದೆ ನಮಗ್ಯಾವ ಭಯವೂ ಇಲ್ದೇ ಇರಬೇಕಾದ್ರೆ ನಿಮಗೀಗಾಗೋ ಅಲ್ಪ ಸ್ವಲ್ಪ ಕಷ್ಟ-ನಷ್ಟಗಳನ್ನ ಸಹಿಸ್ಕೋಬೇಕು. ಸ್ವಲ್ಪ ತ್ಯಾಗ ಬುದ್ಧೀನೂ ಬೇಕು........"

"ಹೌದಯ್ಯಾ....ನಾಳೆ ದಿನ ನಿನ್ನ ಹೆಂಡ್ತಿ ರಸ್ತೇಲಿ ಹೋಗ್ತಿದ್ದಾಗ ನಾಲ್ಕು ಜನ ಸಿಪಾಯಿಗಳು ಅವಳ ಕೈ ಹಿಡ್ಕೊಳ್ತಾರೆ. ..ನೀನು ಆಗ ತ್ಯಾಗ ಬುದ್ಧಿ ತೋರಿಸು ..."

ಹೊರಗೆ ಮರೆಯಾಗಿ ನಿಂತು ಈ ವಾಗ್ವಾದವನ್ನು ಕೇಳುತ್ತಿದ್ದ ರಾಜಿಗೆ ಮೈಯೆಲ್ಲ ಬೆಂಕಿಯಾಯಿತು. ತನ್ನನ್ನೂ ಈ ಕೆಟ್ಟ ಚರ್ಚೆಯ ಒಂದು ವಸ್ತುವಾಗಿ ಎಳೆದರಲ್ಲಾ ಎಂಬ ಅವಮಾನ ಅವಳ ಕಣ್ಣೀರಿಗೆ ಕಾರಣವಾಯಿತು. ಒಂದು ಕಡೆ ಅತಿಥಿಗಳ ಬಗ್ಗೆ ರೋಷವುಂಟಾಯಿತು. ಈ ಕೆಟ್ಟ ಚರ್ಚೆಯನ್ನು ಕೊನೆಗಾಣಿಸಲು ಅತ್ತೆಯವರ ಸಹಾಯ ಕೋರುವ ಉದ್ದೇಶದಿಂದ ಅಡಿಗೆ ಮನೆಯ ಕಡೆಗೆ ನುಗ್ಗಿ ಅವರ ಮರೆ ಹೊಕ್ಕಳು. ರಾಜಿಯ ಕಣ್ಣೀರು ಕಂಡು ಕಾತುರರಾದ ಅತ್ತೆಯವರು, ಅದರ ಕಾರಣ ತಿಳಿದಮೇಲಂತೂ ಅತಿಯಾಗಿ ಕೆರಳಿ, ಅತಿಥಿಗಳಿಗೆಲ್ಲ ಅವರವರ ಮನೆಯ ನೆನಪು ಮಾಡಿಕೊಡಲು ನಿರ್ಧರಿಸಿ ಎದ್ದರು.

ತನ್ನ ಪ್ರತಿವಾದಿಯಿಂದ ಅನಿರೀಕ್ಷಿತವಾಗಿ ಬಂದ ಈ ಪ್ರಹಾರ ದಿಂದ ಮೂರ್ತಿಯು ಕ್ಷಣಮಾತ್ರ ಅಧೀರನಾದ; ಅವಾಕ್ಕಾದ. ಆದರೆ ಎಷ್ಟಾದರೂ ಸೈನಿಕ ಶಿಕ್ಷಣ ಪಡೆದಿದ್ದ ಪ್ರಾಣಿ ಅವನು. ತನ್ನ ಕ್ರೋಧ ವನ್ನೆಲ್ಲ ಅಡಗಿಸಿಕೊಂಡು ಶಾಂತವಾಣಿಯಿಂದ ಉತ್ತರ ಕೊಟ್ಟ.

“ನನ್ನ ಹೆಂಡತಿ ತನ್ನ ರಕ್ಷಣೇಗೆ ಯಾರನ್ನೂ ಜೊತೇಲಿ ಕರ್ಕೊಳ್ದೆ ಒಬ್ಳೇ ರಸ್ತೇಲಿ ಹೋಗಬೇಕಾದ್ರೆ ರಸ್ತೇಲಿ ವಿಪತ್ತು ಒದಗಿದಾಗ ನಿಮ್ಮಂಥಾ ಗಂಡಸ್ರು ತನ್ನ ರಕ್ಷಣೇಗೆ ಬಂದೇ ಬರ್ತಾರೇ ಅಂತನ್ನೋ ಧೈರ್ಯದ ಮೇಲೇ ಹೋಗ್ತಾಳೆ. ಹಾಗೆ ಅವಳ ಪಾಲಿಗೆ ಯಾರೂ ರಕ್ಷಕರೇ ಇಲ್ಲಾಂತ ಅನ್ನೋಷ್ಟರಮಟ್ಟಿಗೆ ರಸ್ತೇಲಿ ಓಡಾಡೋ ಜನ ಗಂಡಸ್ತನಾನ ಕಳ್ಕೊಂಡಿರೋರಾದ್ರೆ ಅವಳಿಂದ ಇತರ ಹೆಂಗಸರಾದ್ರೂ —ಹೊರಗಡೆ ತಾವೆಲ್ಲ ಒಬ್ಬೊಬ್ರೆ ನಿಮ್ಮಂಥಾ ಅಲಂಕಾರ ಪುಟ್ಟಶಾಮಿ ಗಳ ಸಹಾಯ ನೆಚ್ಕೊಂಡು ರಸ್ತೇಲಿ ಧೈರ್ಯವಾಗಿ ಓಡಾಡೋದೂ ತಪ್ಪೂಂತ್ಲಾದ್ರೂ—ಪಾಠ ಕಲ್ತುಕೊಳ್ಳೋಕೆ ಅವಕಾಶವಾಗತ್ತೆ ಅಂತ ಅಂದ್ಕೊಳ್ಳೋಷ್ಟು ತ್ಯಾಗ ಬುದ್ಧಿ ನನ್ನಲ್ಲಿದೆ.”

ಮೂರ್ತಿ ಹೇಳಿದ್ದಕ್ಕೆ ಮತ್ತೊಬ್ಬ ಮನುಷ್ಯ ಏನೋ ಒಂದು ಪ್ರಶ್ನೆ ಹಾಕಬೇಕೆಂದು ಉತ್ಸುಕನಾಗಿದ್ದ. ಅಷ್ಟರಲ್ಲಿ ಕೋಣೆಯ ಹೊರಗಡೆಯಿಂದ ಮೂರ್ತಿಯ ತಾಯಿಯವರು “ಅವನಿಗೆ ಜ್ವರಾ ಬಿಟ್ಟಿಲ್ಲಪ್ಪಾ; ಸುಮ್ನೆ ಯಾಕೆ ಮಾತಾಡೋಕೆ ಅವನಿಗೆ ಅವಕಾಶ ಕೊಡ್ತೀರಿ. ಮಾತಾಡಿ ಮಾತಾಡಿ ಅವನಿನ್ನೂ ಹೆಚ್ಮಾಡ್ಕೋತಾನೆ ಜ್ವರಾನ; ಹುಷಾರಾದ್ಮೇಲೆ ನಿಧಾನವಾಗಿ ಯಾವಾಗ್ಲಾದ್ರೂ ಬನ್ನಿ” ಎಂದು ವಾಗ್ವಾದಗೋಷ್ಠಿಗೆ ಚದರುವ ‘ನೋಟೀಸ್’ ಕೊಟ್ಟು ಬಿಟ್ಟರು. ಅತಿಥಿಗಳು ವಿಧಿಯಿಲ್ಲದೆ ಒಬ್ಬೊಬ್ಬರು ಒಂದೊಂದು ಕೆಲಸದ ನೆಪ ತೆಗೆದುಕೊಂಡೆದ್ದು ಹೊರಟುಹೋದರು. ಮಾತುಕತೆಗಳ ಸರಣಿಯು ತಾವು ಬಗೆದುದಕ್ಕೆ ವಿರುದ್ಧವಾಗಿಯೇ ಬದಲಾದುದರಿಂದ ಹಲವರು ನಿರಾಶರಾಗಿ ತೆರಳಿದರು. ಮೂರ್ತಿಗೆ ತಾನು ಕಂಡ

ರಣಭೂಮಿಯ ಭಯಂಕರ ಸ್ವರೂಪವನ್ನು ಅವರ ಮುಂದೆ ವರ್ಣಿಸಲು ಆಗದೆ ಹೋದುದಕ್ಕಾಗಿ ನಿರಾಶೆಯಾಯಿತು. ಆದರೂ ಇಷ್ಟೆಲ್ಲ ಚರ್ಚೆಯಿಂದ ಆದ ಉದ್ವೇಗದಲ್ಲಿ ಜ್ವರವಿನ್ನೂ ಅಧಿಕವಾಯಿತು. ನಿಟ್ಟುಸಿರುಬಿಟ್ಟು ಹಾಸಿಗೆಯನ್ನಪ್ಪಿದ.

+ × × +

ಆ ಸಂಜೆ ಮೂರ್ತಿಯ ಮೈಗೆ ಅಂಟಿದ್ದ ಜ್ವರವಿಳಿದಿದ್ದರೂ ಮಧ್ಯಾನ್ಹದ ವಾಗ್ವಾದದಿಂದ ಮೆದುಳಿಗೇರಿದ್ದ ಜ್ವರ ಇಳಿದಿರಲಿಲ್ಲ. ಅತಿಥಿಗಳ ಪೈಕಿ ಒಬ್ಬರಾಡಿದ್ದ ಮಾತು ಮನಸ್ಸಿಗಂಟಿಕೊಂಡಿತ್ತು. ಅದನ್ನೇ ಮೆಲುಕುಹಾಕುತ್ತಿದ್ದ. ತಾನು ಕುಂಟು-ಕುರುಡನಾಗದೆ ಸರ್ವಾಂಗ ಸಹಿತನಾಗಿ ಅವರೆಲ್ಲರಂತೆಯೇ ಇದ್ದಿದ್ದರೆ ಆರೀತಿ ಅವರು ಮಾತನಾಡುವ ಎದೆಗಾರಿಕೆ ತೋರಿಸುತ್ತಿರಲಿಲ್ಲವೆಂದು ಭಾವಿಸಿದ. ಆ ವೇಳೆಗೆ ಸರಿಯಾಗಿ ಸ್ಥಳೀಯ ಕನ್ನಡ ಪತ್ರಿಕೆಯೊಂದನ್ನು ಹಂಚುವ ಮನುಷ್ಯನು 'ಪೇಪರ್' ಎಂದು ಕೂಗಿ ಮನೆಯೊಳಕ್ಕೆ ಪತ್ರಿಕೆಯನ್ನೆಸೆದು ಹೋದ; ಮೂರ್ತಿಯು, "ರಾಜೀ...." ಎಂದು ಕೂಗು ಹಾಕಿದ. ಒಂದೆರಡು ನಿಮಿಷಗಳ ಮೇಲೆ ರಾಜಿಯು ಬಂದು, 'ಏನು?' ಎಂದಳು. ಮೂರ್ತಿಯು, "ಪೇಪರ್ ಬಂದಿರಬೇಕು. ತಗೊಂಡು ಬಂದು ಓದ್ತೀಯಾ?" ಎಂದು ಕೇಳಿದ. ರಾಜಿಯು ಮರು ಮಾತನಾಡದೆ ಹೋಗಿ ಪತ್ರಿಕೆಯನ್ನು ತಂದಳು.

ಮೊಟ್ಟ ಮೊದಲನೆಯದೇ ಎದೆಯೊಡೆಯುವ ಸುದ್ದಿ. ರಾಜಿಯು ಓದಿದಳು: 'ಕೋಕನಾಡಾ, ವಿಶಾಖಪಟ್ಟಣಗಳ ಮೇಲೆ ಜಪಾನೀ ವಿಮಾನಗಳ ದಾಳಿ.'

ಮೂರ್ತಿಯು ಜಗ್ಗನೆ ಹಾಸಿಗೆಯಲ್ಲಿದ್ದು ಕುಳಿತು, "ಏನೂ?" ಎಂದ. ರಾಜಿಯು ಮತ್ತೊಮ್ಮೆ ಶಿರೋನಾಮೆಯಿಂದ ಹಿಡಿದು ಸುದ್ದಿಯನ್ನು ಓದಿದಳು. ಮೂರ್ತಿಯು ವಿಕಟ ನಗುವನ್ನು ಮೆಲುವಾಗಿ ನಕ್ಕು, "ಹೂಂ!....ಇನ್ನು ನಮ್ಮ ಮನೇ ಬಾಗಿಲಿಗೇ ಶತ್ರುಗಳು

ಬಂದು ನಿಂತಿರೋದಕ್ಕೆ ಇದು ಸೂಚನೆ; ಯಾವ ದಿನ ಬಂದಿಳಿದರೂ ಇಳಿದಾರು. ಈಗ ಈ ತಿಂಡಿಪೋತರಾಯರೆಲ್ಲಾ ಏನೇನು ಕಡಿದು ಕಟ್ಟೇ ಹಾಕ್ತಾರೋ ಎಲ್ಲಾ ಗೊತ್ತಾಗುತ್ತೆ. ಕುಟೀಕೆ ಮಾಡ್ತಾ ಊಟದ ರುಚಿ ಎಣಿಸಿದ ಹಾಗಲ್ಲ. ಜಪಾನೀಯರನ್ನು ಎದುರಿಸೋದು ಅಂದ್ರೆ. ಸುಮ್ನೆ ನಮ್ಮ ಸೈನಿಕರ ಹೆಸರಿನಲ್ಲಿ ಶಂಖ ಹೊಡೀತಿದ್ರಲ್ಲಾ, ಇನ್ಮೇಲೆ ಗೊತ್ತಾಗುತ್ತೆ ಅವರ ಬೆಲೆ ಎಷ್ಟೂಂತ."

ರಾಜಿಯು ಮುಂದಕ್ಕೆ ತನ್ನ ಪಾಡಿಗೆ ತಾನು ಓದಿಕೊಂಡು ಹೋದಳು........"....ಮದರಾಸು ಬಂದರಿಗೆ ಸುಮಾರು ೫ ಮೈಲಿ ದೂರದಲ್ಲೇ ಶತ್ರು ನೌಕೆಗಳೂ, ಏರ್‌ಕ್ರಾಫ್ಟ್ ಜಹಜುಗಳೂ ಸಂಚರಿಸುತ್ತಿರುವುವೆಂದು ತಿಳಿದು ಬಂದಿದೆ....' ...

ಮೂರ್ತಿಯು,...."ನಮ್ಮ ಜನ ಈಗ್ಲೇ ಎಚ್ಚತ್ತು, ತಂತಮ್ಮ ಜಗಳಾ-ಕದನಗಳ್ನೆಲ್ಲಾ ಮೂಲೆಗೊತ್ತಿ ಒಗ್ಗಟ್ಟಾಗಿ ನಿಂತು ಶತ್ರುಗಳನ್ನೆದುರಿಸಿ ಮಟ್ಟಾ ಹಾಕೋಕೆ ಸಿದ್ಧವಾದ್ರೋ ಬದುಕಿದ್ರು; ಇಲ್ದೇ ಹೋದ್ರೆ ಜಪಾನಿಗಳು ನಮ್ಮ ದೇಶದೊಳಕ್ಕೆ ನುಗ್ಗಿ ಬರೋಕೆ ಅವಕಾಶವಾಗುತ್ತೆ. ಬಂದ್ಮೇಲೆ, ನಿದ್ದೇ ಮಾಡ್ತಿರೋ ನಂಜನ ಎಚ್ಚರವಾಗೋದ್ರೊಳಗಾಗಿ ಅವರನ್ನೆಲ್ಲಾ ತಿಗಣೆಗಳನ್ನ ಹೊಸಕಿದ ಹಾಗೆ ಹೊಸಕ್ಹಾಕಿ ಬಿಡ್ತಾರೆ" ಎಂದ.

ರಾಜಿಯು ಮುಂದೆ ಮುಂದೆ ಓದಿಕೊಂಡು ಹೊರಟಳು. ಮಧ್ಯೆ ಮಧ್ಯೆ ಮೂರ್ತಿಯು ತನ್ನ ಟೀಕೆಯನ್ನೂ ಮುಂದುವರಿಸುತ್ತಿದ್ದ. ರಾಜಿಯು ಪುಟ ತಿರುಗಿಸಿ ಓದುತ್ತಿದ್ದಾಗ ನ್ಯಾಯಾಸ್ಥಾನಗಳ ಸುದ್ದಿ ಸಂಗ್ರಹದಲ್ಲಿ 'ಸೈನಿಕರಿಗೆ ಶಿಕ್ಷೆ' ಎಂಬ ಶಿರೋನಾಮೆ ಕಣ್ಣಿಗೆ ಬೀಳಲು ಅದನ್ನು ಕುತೂಹಲದಿಂದ ಓದಿದಳು. ಅದರ ವಿವರಗಳನ್ನು ಮೂರ್ತಿಯು ಕೇಳಲು, ಕೆಲವು ದಿನಗಳ ಹಿಂದೆ ಆ ಸೈನಿಕರು ಒಂದು ಹಳ್ಳಿಗೆ ನುಗ್ಗಿ ಅಲ್ಲಿ ಒಬ್ಬಿಬ್ಬರು ಹೆಂಗಸರ ಮೇಲೆ ಅತ್ಯಾಚಾರ ನಡೆಸಲು ತೊಡಗಿದಾಗ ಹಳ್ಳಿಯವರಿಗೂ ಅವರಿಗೂ ಹೊಡೆದಾಟ

ಗಳಾಗಿ ಒಬ್ಬಾತನು ಸತ್ತನೆಂದೂ, ಕೊನೆಗೆ ಸೈನಿಕರು ಸಿಕ್ಕಿಬಿದ್ದು ವಿಚಾರಣೆಗೊಳಪಡಿಸಲ್ಪಟ್ಟಿದ್ದರೆಂದೂ ರಾಜಿಯು ತಿಳಿಸಿದಳು.

ಮೂರ್ತಿಯು, "... ....ಓಹೋ! ಅದಕ್ಕೇನೋ ಮಧ್ಯಾಹ್ನ ಇವರೆಲ್ಲ ಹಾರಾಡ್ತಿದ್ದದ್ದು ?" ಎಂದು ಮನೆಗೆ ಬಂದಿದ್ದ ಅತಿಥಿಗಳನ್ನು ದ್ದೇಶಿಸಿ ಟೀಕಿಸುತ್ತಾ,........" ಇಷ್ಟಕ್ಕೆಲ್ಲಾ ಹೀಗೆ ಕುಣಿದಾಡಿದ್ರಲ್ಲಾ ಇವ್ರು ಚೈನಾದಲ್ಲಿ ಜಪಾನೀ ಸೈನಿಕರು ನುಗ್ಗಿದ ಒಂದೊಂದು ಊರಲ್ಲೂ ಮನೆ ಮನೇಗೆ ನುಗ್ಗಿ, ಆ ಗಂಡಸ್ರೆದುರ್ಗೇನೇ ಅವರವರ ಮನೇ ಹೆಂಗಸರ ಮೇಲೆ ಅತ್ಯಾಚಾರ ಮಾಡಿದ ಕತೆಗಳ್ನೆಲ್ಲಾ ಕೇಳಿದ್ರೆ ಆಗೇನಂತಾ ಇದ್ರೊ? ಇನ್ನೂ ನಮ್ಮ ಸೈನಿಕರು ಅವರಿಗಿಂತ ಎಷ್ಟೋ ವಾಸಿ" ಅಂದ.

ರಾಜಿಯು ಅಸಹ್ಯ, ಜಿಗುಪ್ಸೆಗಳಿಂದ ಅವನ ಮುಖ ನೋಡುತ್ತ ಮೌನದಿಂದ ಕುಳಿತಳು. ಆದರೆ ಆ ಮೌನದಲ್ಲಿ ಕಿಂಚಿತ್ ಕೋಪವೂ ತಲೆಹಾಕಿ ಅವಳ ಮನಸ್ಸನ್ನು ಕೆರಳಿಸಿತು.

'ಅವರಿಗಿಂತ ಇವರೆಷ್ಟೋ ವಾಸೀಂತ ಅವರಾಡಿದಾಟಾನೆಲ್ಲಾ ಮೆಚ್ಕೊಳ್ಳಿ' ಎಂದಳು.

'ಹಾಗಲ್ಲ ರಾಜಿ! ಅವರೂ ಎಲ್ಲರ ಹಾಗೆ ಮನುಷ್ಯರು. ದೇಶಕ್ಕೋಸ್ಕರ ಹೊಡೆದಾಡಿ ಸಾಯೋಕೆ ಸಿದ್ಧವಾಗಿರೊ ಸಿಪಾಯಿಗಳು. ಅಂಥಾವ್ರೋರಿಂದ ಏನು ಹೆಚ್ಚು ಕಡಿಮೆ ಆದರೂ ಜನಾ ಸ್ವಲ್ಪ ಔದಾರ್ಯ ಬುದ್ಧಿ ತೋರಿಸ್ಬೇಕು. ಪರದೇಶಗಳಲ್ಲಿ ಕೋಟ್ಯಾಂತರ ಹೆಂಗಸರು ಇಂಥಾ ಸಿಪಾಯಿಗಳ ಮನರಂಜನೇಗೇಂತ್ಲೇನೆ ಯುದ್ಧ ಕಾಲದಲ್ಲಿ ತಮ್ಮ ಜೀವನ ಒಪ್ಪಿಸಿಬಿಡ್ತಿದ್ದಾರೆ. ಹಾಗೇನೆ ನಮ್ದೇಶ ದಲ್ಲೂನೂ ಹೆಂಗಸರ ಒಂದು ಸೈನ್ಯ, ಅದೇ ರೀತಿ ಸೈನಿಕರ ಸೇವೇಗೆ ತಮ್ಮ ಜೀವನ ಮೀಸಲಾಗಿಟ್ಟು ಮುಂದೆ ಬರಲಿ. ಅದೂ ಕೂಡ ದೇಶಸೇವೆ ಅಲ್ವೆ? ಆಗ ನೋಡು; ಸೈನಿಕರು ಯಾಕೆ ಒಲ್ಲದ ಹೆಣ್ಣಿನ ಮೇಲೆ ಕೈಹಾಕೋಕೆ ಬಂದಾರು? ಸರ್ಕಾರದೋರು ಈ ತರಹ ಒಂದು ವ್ಯವಸ್ಥೇನ ಹೊರದೇಶಗಳಲ್ಲಿರೋ ಹಾಗೇನೇ ಇಲ್ಲೂ ಜಾರೀಲಿ

ಬರೋಕೆ ಅವಕಾಶ ಕಲ್ಪಿಸಿಕೊಡಬೇಕು; ಹಾಗೆ ಮುಂದೆ ಬಂದ ಹೆಂಗಸರ ಸಾಮಾಜಿಕ ಜೀವನದ ಸ್ಥಾನಮಾನ, ಸ್ಥಿತಿಗತಿಗಳ ಭದ್ರತೆಯ ಭರವಸೆ ಕೊಡಬೇಕು. ಅಂದ್ರೆ ಆಗ ಯಾವ ತಂಟೇನೂ ಇರೋದಿಲ್ಲ. ಹೆಂಗಸರೂನೂ....'

ರಾಜಿ ಬೆರಗಾದಳು; ಇವೆಲ್ಲ ಕೇಳುತ್ತ ಕೇಳುತ್ತ ಮೂರ್ತಿಯ ಮೇಲೇ ಒಂದು ಬಗೆಯ ದ್ವೇಷ ಹುಟ್ಟುತ್ತಿರುವಂತೆ ಅವಳಿಗೆ ಭಾಸವಾಯಿತು. ಆ ಭಾವನೆಗೆಡೆಗೊಡುವ ಸಂಭಾಷಣೆಯೇ ತನ್ನ ಕಿವಿಗೆ ಬೀಳದಿದ್ದರೆ ಲೇಸೆಂದು ಅವಳು, “ ಸಾಕು ಸುಮ್ನಿರಿ! ನನಗೆ ಬೇಡ ನಿಮ್ಮ ಪುರಾಣ ” ಎಂದು ಎದ್ದಳು. ರಾಜಿಯಾಡಿದ ಮಾತಿನ ಧ್ವನಿಯು ಮೂರ್ತಿಯ ಹೃದಯದಲ್ಲೊಂದು ಕಿಚ್ಚನ್ನು ಹೊತ್ತಿಸಿತು. ರಾಜಿಯ ಮನಸ್ಸಿನಲ್ಲಿ ನೋವುಂಟುಮಾಡಬೇಕೆಂಬ ಒಂದು ಆಕಾಂಕ್ಷೆ ತಟ್ಟನೆ ತಲಹಾಕಿತು.

“ ಪುರಾಣವೇನು ಬಂತು? ..ಇವೆಲ್ಲ ಒಂದಲ್ಲ ಒಂದು ದಿನ ಆಗಲೇ ಬೇಕು. ಎಂದೋ ಬಲಾತ್ಕಾರದಿಂದ ರೂಢಿಗೆ ಬರೋದು ಈ ಹೊತ್ತೇ ತಾನಾಗಿ ಆರಂಭವಾಗ್ಲಿ. ಹೆಂಗಸ್ರೇನೂ ಇದನ್ನ 'ಅವಮಾನ' ಅಂತ ತಿಳಿದು ತಲೆ ತಗ್ಗಿಸ್ಬೇಕಾದ್ದಿಲ್ಲ. ಸಿಪಾಯಿಗಳ ತ್ಯಾಗಕ್ಕಿಂತ್ಲೂ ಇದು ಹೆಚ್ಚಿನ ತ್ಯಾಗ. ಅವರನ್ನ ಇದಕ್ಕಾಗಿ ಯಾರೂ ಅವಹೇಳನ ಮಾಡಿ ನಿಕೃಷ್ಟವಾಗಿ ನೋಡೋ ಹಾಗಿಲ್ಲ. ನಾಳೆ ನೀನೇ ಹಾಗೆ ದೇಶಸೇವೆ ಮಾಡೋಕೆ ನಿಂತರೆ ನನ್ನ ದೃಷ್ಟೀಲೇನೂ ನೀನು ಕೀಳಾಗೊಲ್ಲ. ಅದರ ಬದಲು ನೀನೊಬ್ಬ ಮಹಾ ತ್ಯಾಗಿ, 'ಹಿರೋಯಿನ್' ಅಂತ ನಿನಗೆ ನಾನು ಗೌರವ ಕೊಡ್ತೇನೆ ” ಅಂದ.

ರಾಜಿಯ ತುಟಿಗಳು ಕಂಪಿಸುತ್ತಿದ್ದವು. 'ಈ ಮಾತುಗಳು ತನ್ನ ಮೂರ್ತಿಯ ಬಾಯಿಂದಲ್ಲ-ಕ್ಯಾಪ್ಟನ್ ಮೂರ್ತಿ–ಯ ಬಾಯಿಂದ ಹೊರಟು ಬರುತ್ತಿವೆ'ಯೆಂದು ಅವಳ ಮನಸ್ಸು ಒತ್ತಿ ಒತ್ತಿ ಹೇಳಿತು. ತನ್ನ ಮೂರ್ತಿಯು ಯುದ್ಧರಂಗದಲ್ಲೇ ಮಡಿದನೇ ಎಂದು ಹೃದಯವು

ಮೊರೆಯಿಟ್ಟಿತು. ಮುಖವು ಬಿಳಿಚಿಕೊಂಡಿತು. 'ನನಗಿನ್ನೂ ಹಾಳು ಸಾವು ಬರಲಿಲ್ಲವಲ್ಲಾ' ಎಂದುಕೊಂಡು ಕಂಬನಿದುಂಬಿ ರಭಸದಿಂದ ಕೋಣೆಯಿಂದ ಓಡಿಹೋದಳು.

ಮೂರ್ತಿಗೆ ನಗು ಬಂದಿತು. ರಾಜಿಯು ಹದಿನಾರಾಣೆ ಕಂದಾಚಾರದವಳು! ಅವಳಿಗೀ ಮಾತುಗಳು ಅಸಭ್ಯವೆಂದು ತೋರಿ ಕೋಪ ಬಂದಿರಬೇಕೆಂದುಕೊಂಡ. ಅವಳನ್ನು ಆಗಿಂದಾಗ್ಗೆ ರೇಗಿಸಲು ಒಂದು ಒಳ್ಳೆಯ ಸಾಧನವೇ ಸಿಕ್ಕಿತೆಂದು ಹೊಟ್ಟೆ ಹುಣ್ಣಾಗುವಷ್ಟು ನಕ್ಕುಬಿಟ್ಟ.

ನಗುನಗುತ್ತ ಅವನ ನಗು ವಿಕಟವಾಯಿತು. ಹುಚ್ಚನಂತೆ ನಕ್ಕ. ಕಣ್ಣುಗಳಲ್ಲಿ ನೀರುತುಂಬಿತು. ಓಡುವ ಮುಂಚೆ ರಾಜಿಯಾಡಿದ ಮಾತುಗಳು ಮೆಲ್ಲಮೆಲ್ಲನೆ ಅವನ ಸುತ್ತಲೂ ಮೊರೆಯಲಾರಂಭಿಸಿದವು -"ನನಗಿನ್ನೂ ಹಾಳುಸಾವು ಬರಲಿಲ್ಲವಲ್ಲಾ........ನನಗಿನ್ನೂ ಹಾಳು ಸಾವು ಬರಲಿಲ್ಲವಲ್ಲಾ" ಎಂದು ಮೆದಳು ಅದಕ್ಕೆ ಮಾರ್ದನಿ ಕೊಟ್ಟಿತು. ಕಿವಿಯಲ್ಲಿ ಮತ್ತೂ ಗಡುಸಾಗಿ ಅದೇ ಮಾತುಗಳು ಮತ್ತೊಮ್ಮೆ ಮೊರೆದವು. ಈ ಬಾರಿ ಹೃದಯವೂ ಅತಿ ಭಯಂಕರವಾಗಿ ಅದಕ್ಕೆ ಮಾರ್ದನಿ ಕೊಟ್ಟಿತು. ಕುಳಿತಿದ್ದ ಮೂರ್ತಿಯು ತಟ್ಟನೆ ಮಂಕುಬಡಿದವನಂತೆ ಹಾಸಿಗೆಯಲ್ಲಿ ಹಿಂದಕ್ಕೆ ಬಿದ್ದ. ಮಂಚದ ಅಂಚು ಥೊಪ್ಪನೆ ತಗುಲಿತ್ತು, ಈ ಪೆಟ್ಟಿನಿಂದಾದ ನೋವನ್ನರಿಯುವಷ್ಟು ಪರಿವೆಯೂ ಮೂರ್ತಿಗಿರಲಿಲ್ಲ. ಅಲುಗಾಡದೆ ಶವದಂತೆ ಬಿದ್ದಿದ್ದ. ಕಣ್ಣೀರು ಮೆಲ್ಲನೆ ಹರಿದು ಬಂದು "ದೇವರು ತನ್ನನ್ನು ಯುದ್ಧರಂಗದಲ್ಲೇ ಸಾಯಗೊಡದೆ ಏಕೆ ಹೀಗೆ ಹಿಂತಿರುಗಿಸಿದ"ನೆಂದು ಮನವು ಮರುಗಿತು. ಕ್ಷಣಕಾಲಾನಂತರ...."ಕ್ಷಮಿಸು, ರಾಜಿ!"....ಎಂದು ಅವನ ನೊಂದ ಹೃದಯವು ನುಡಿಯಿತು. ಅದನ್ನೇ ಅವನ ನಾಲಿಗೆಯು ಮೆಲ್ಲನೆ ಉಚ್ಚರಿಸಿತು. ಆದರೆ ಆ ನುಡಿಗೆ ಕಿವಿಗೊಡಲು ರಾಜಿಯು ಅಲ್ಲಿರಲಿಲ್ಲ.

ಮೂರ್ತಿಯು ಒಂದೆರಡು ಬಾರಿ ಕೂಗಿ, ಹೇಳಿಕಳುಹಿಸಿದರೂ ರಾಜಿಯು ಅವನ ಕೋಣೆಯ ಕಡೆ ಅಂದು ಸುಳಿಯಲಿಲ್ಲ.

× × × ×

— ೪ —

ಮೂರ್ತಿಯು ಮನೆಯ ಮೂಲೆದೇವರಾಗಿ ಕೂಡಲಾರಂಭಿಸಿ ಐದಾರು ತಿಂಗಳುಗಳು ಕಳೆದವು. ಅವನು ಯೋಧನಾಗಿ ತೆರಳುವ ಮುಂಚೆ ಮನೆಯವರೆಲ್ಲರ ಪ್ರೀತಿ–ವಿಶ್ವಾಸಗಳಿಗೆ ಎಷ್ಟು ಪಾತ್ರನಾಗಿದ್ದನೋ, ಯುದ್ಧಭೂಮಿಯಿಂದ ಅಂಗಹೀನನಾಗಿ ಹಿಂದಿರುಗಿದ ಈ ಕೆಲ ತಿಂಗಳುಗಳಲ್ಲೇ ಅಷ್ಟಕ್ಕಷ್ಟೂ ಮನೆಯವರೆಲ್ಲರ ಆಕ್ರೋಶ–ಅಸಹ್ಯಗಳಿಗೆ ಈಡಾಗಿಬಿಟ್ಟಿದ್ದ. ಇತರರ ನೆರವನ್ನೇ ಅವಲಂಬಿಸಿಕೊಂಡು ತನ್ನ ಬಾಳನ್ನು ನಿರ್ವಹಿಸಬೇಕಾಗಿ ಬಂದ ತನ್ನ ಅಸಹಾಯಕತೆಯ ಬಗ್ಗೆ ಅವನೇ ರೊಚ್ಚಿಗೆದ್ದು, ತನ್ನ ಆ ಸಿಟ್ಟನ್ನು ಅವಕಾಶ ದೊರೆತಾಗಲೆಲ್ಲ ಮನೆಯ ಪ್ರತಿಯೊಬ್ಬ ವ್ಯಕ್ತಿಯಮೇಲೂ ತೀರಿಸಿಕೊಳ್ಳುತ್ತಿದ್ದ. ಇದರಿಂದ ಕ್ರಮಕ್ರಮವಾಗಿ ಯಾರೊಬ್ಬರೂ ಅವನ ಕೋಣೆಯಬಳಿ ಸುಳಿಯದಾದರು. ಕೊನೆಕೊನೆಗೆ ಅವನ ಕೂಗಾಟ-ಆರ್ಭಟಗಳಿಗೆಲ್ಲ, ಕೈಹಿಡಿದ-ಸಹಾಯಶೂನ್ಯ ರಾಜಿಯೊಬ್ಬಳು ಮಾತ್ರ ಗುರಿಯಾಗಿ ಉಳಿದುಕೊಂಡಳು. ಅವಳ ಮಾನಸಿಕ ಶಾಂತಿಯನ್ನೂ ಹಾರಿಸಿ, ಚಿತ್ರಹಿಂಸೆ ಕೊಡುವಷ್ಟುಮಟ್ಟಿಗೆ ಮೂರ್ತಿ ಕ್ರೂರಿಯಾದ. ಆ ಬಗೆಯ ಕ್ರೌರ್ಯಕ್ಕೆ ಸಿಕ್ಕಿ ಯಾವ ರೀತಿ ರಾಜಿಯು ವಿಲವಿಲನೆ ಒದ್ದಾಡುವಳೆಂಬ ಚಿತ್ರ ಮೂರ್ತಿಯ ಕುರುಡುಕಣ್ಣಿನ ಮುಂದೂ ಆಗಾಗ ನಿಂತು, ಅವನಿಗೆ ಏನೋ ಒಂದು ಬಗೆಯ ವಿಕಟ ಆನಂದ ದೊರೆಯುತ್ತಿತ್ತು. ಈ ಒಂದು ವಿಚಿತ್ರಾನಂದವನ್ನು ಮತ್ತೆ ಮತ್ತೆ ಮೂರ್ತಿ ಪಡೆಯಲಾಶಿಸುತ್ತಿದ್ದುದರ ಪರಿಣಾಮವಾಗಿ ರಾಜಿಯು ಒಮ್ಮೊಮ್ಮೆ ಯತ್ನ ತಪ್ಪಿ ಪ್ರತಿಭಟಿಸುವಂತಾದರೂ ಮೂರ್ತಿಯ ಬಾಯಿಂದ ಹೊರಡಲಾರಂಭಿಸುತ್ತಿದ್ದ ಅಪಶಬ್ದಗಳನ್ನು ಕೇಳಲಾರದೆ ಉಪಾಯಶೂನ್ಯಳಾಗಿ ಕಣ್ಣೀರು ಮಿಡಿಯುತ್ತಿದ್ದಳು. ಆಗ ಅವಳ ಬಾಯಿಂದ ಮತ್ತೆ 'ನನಗಿನ್ನೂ ಸಾವು ಬಾರದೇ?' ಎಂಬ ಮಂತ್ರದ ಪುನರ್ಪಠಣೆಯಾಗುತ್ತಿತ್ತು. ಅದೊಂದೇ ಮೂರ್ತಿಯ ರಣ ಗುಂಡಿಗೆ

ಯನ್ನು ಛಿದ್ರಗೊಳಿಸುತ್ತಿದ್ದ ಒಂದು ಮಹಾಸ್ತ್ರ. ಆಗ ಮೂರ್ತಿ ಎದೆಗೆಟ್ಟು ಮೌನಮೂರ್ತಿಯಾಗಿ ಕೂಡುತ್ತಿದ್ದ. ಅವನ ವರ್ತನೆ ಅವನಿಗೇ ಹೇಸಿಗೆಯನ್ನುಂಟುಮಾಡುತ್ತಿದೆಯೆಂದು ಅದೊಂದರಿಂದಲೇ ರಾಜಿಯು ತಿಳಿದುಕೊಳ್ಳಬೇಕಾಗಿತ್ತು. ಅಂತಹ ಸ್ಥಿತಿಯಲ್ಲಂತೂ ಅವಳು ದುಃಖದಿಂದ ನೆಲಕ್ಕಿಳಿಯುತ್ತಿದ್ದಳು. ತತ್ಫಲವಾಗಿ ಇಮ್ಮಡಿ ಕನಿಕರ–ಪಶ್ಚಾತ್ತಾಪದಿಂದ ಕೂಡಿ, ಹಳೆಯ ಮೂರ್ತಿಯನ್ನು ನೆನೆದು ಈ ಮೂರ್ತಿಯ ಸೇವೆಗೆ ಹುರುಪಿನಿಂದ ನಿಲ್ಲುತ್ತಿದ್ದಳು.

ಹೊರಗಿನವರಿಗೆ ಈ ವಿಚಿತ್ರ ಪ್ರೇಮ ಅರ್ಥವಾಗುತ್ತಿರಲಿಲ್ಲ. ನೆರೆಹೊರೆಯವರಲ್ಲಿ ಒಬ್ಬೊಬ್ಬರೂ ಒಂದೊಂದು ಬಗೆಯಾಗಿ ರಾಜಿಯ ಸುತ್ತ ಕತೆಗಳನ್ನು ಹೆಣೆಯುತ್ತಿದ್ದರು. ಬಾಯಿಂದ ಬಾಯಿಗೆ, ಕಿವಿಯಿಂದ ಕಿವಿಗೆ ಅವು–ವಿಶ್ವರೂಪಿಯ ವಿವಿಧ ಮುಖಗಳಂತೆ–ವಿಲಕ್ಷಣ ಸ್ವರೂಪ ತಾಳಿ ಹರಡುತ್ತ ಹೋಗಲಾರಂಭಿಸಿದ್ದವು.

ಕೆಲವರು, ರಾಜಿಯು ತನ್ನ ದೇಹಚಾಪಲ್ಯಗಳನ್ನು ಇತರೆಡೆಗಳಲ್ಲಿ ತೀರಿಸಿಕೊಳ್ಳುತ್ತಿರುವುದಕ್ಕೆ ಈ ಅಂಗವಿಹೀನ ಪತಿಸೇವೆ ಒಂದು ತೋರಿಕೆಯ ಆಟವೆಂದರು. ಮತ್ತೆ ಕೆಲವರು " ಈ ಕುಂಟು-ಕುರುಡ ಗಂಡನಿಂದ ಈ ವಯ್ಯಾರಿಗೆಲ್ಲಿಯ ಸಂಸಾರ ಸುಖವಿದ್ದೀತಯ್ಯಾ? ಅವನು ಕರೆದಾಗ ಒಂದೆರಡು ಬಾರಿ ಉಪಚಾರದಾಟ ಆಡಿಬಿಟ್ಟರೆ ತೀರಿತು ; ಅವನ ಬೆನ್ನ ಹಿಂದೆ ಯಾವ ಆಟ, ಯಾರೊಡನೆ ಆಡಿದರೆ ತಾನೇ ಏನು? ಕೇಳುವರ್ಯಾರು ?" ಎಂದು ಮುಂತಾಗಿ ಮನಸ್ವಿ ಟೀಕಿಸುತ್ತ ನಡೆದಿದ್ದರು. ಈ ಕತೆಗಳನ್ನು ಕೇಳಿದ್ದ ಕೆಲವು ಮಂದಿ ರಸಿಕ ತರುಣರು ರಾಜಿಯ ಮನೆಯ ಮುಂದೆ ಸುಳಿದಾಡುವುದು, ಶೀಟಿಹಾಕುವುದು ಹೆಚ್ಚಾಯಿತು. ರಾಜಿಯು ಬಂಧು ಮಿತ್ರರ ಮನೆಗಳಿಗೆ ಅರಿಶಿನ–ಕುಂಕುಮಗಳಿಗೆ ಹೋಗಲು ರಸ್ತೆಗೆ ಕಾಲಿಟ್ಟರೆ ತೀರಿತು, ಅವಳು ಮತ್ತೆ ಮನೆಸೇರುವುದರೊಳಗಾಗಿ ಸಾವಿರಬಾರಿ ಸಾಯುತ್ತಿದ್ದಳು. ಅಷ್ಟುಮಟ್ಟಿಗಿತ್ತು, ರಸ್ತೆಗಳಲ್ಲಿ ಹೆಣ್ಣುಮಕ್ಕಳಬಗ್ಗೆ ಹಿಂದೂಗಳ

ಸೌಜನ್ಯ ಶೀಲ ನಡೆವಳಿಕೆ ಮತ್ತು ನುಡಿವಳಿಕೆ. ಇಂತಹ ಕಷ್ಟಗಳಿಗೆ ಸಿಕ್ಕಿ ರಾಜಿಯು ಕೊರಗುತ್ತಿದ್ದುದರ ಪರಿಚಯ ಒಂದೊಂದು ಬಾರಿ ಮೂರ್ತಿಗೂ ಆಗುತ್ತಿತ್ತು. ಆಗ ಅವನೂ ಮನಸೊಂದು ರಾಜಿಗೆ ನಾಲ್ಕು ಸಹಾನುಭೂತಿಯ ಮಾತುಗಳಾಡಲೆಳಸಿ ಅವಳೂ ವ್ಯಂಗ್ಯವಾಗಿ "ಯಾಕೆ ? ಹೆಂಗಸರೇನೂ ಇದನ್ನೂ 'ಅವಮಾನ' ಅಂತ ತಿಳೀದೇ ಇದ್ರೆ ಆಯ್ತಲ್ಲ; ಅವರೂ ಸಿಪಾಯಿಗಳಿಗಿಂತ ಮಹಾ ತ್ಯಾಗಿಗಳೆನ್ನಿಸಿ ಕೊಳ್ಳೊಲ್ವೆ ?" ಅಂದು ಬಿಟ್ಟು ಮೂರ್ತಿಯ ಮೇಲೆ ಸ್ವಲ್ಪಮಟ್ಟಿಗಾದರೂ ತನ್ನ ಸೇಡು ತೀರಿಸಿಕೊಳ್ಳಲೆತ್ನಿಸುತ್ತಿದ್ದಳು. ಆದರೂ ಎಷ್ಟೇ ಆಗಲಿ ಹೆಂಗರುಳು; ತಾನಂದುದಕ್ಕೆ ತಾನೇ ಮತ್ತೆ ಮರುಗಿ ಮೂರ್ತಿಯ ಬಳಿ ಕಣ್ಣೀರಿಡುತ್ತ ಕೂಡುತ್ತಿದ್ದಳು. ಆಗ ಮೂರ್ತಿಯ ಸರದಿ ! "ನಾನೇಕೆ ಯುದ್ಧಭೂಮಿಯಲ್ಲೇ ಸಾಯದೆ ಹಿಂದಿರುಗಿದೆ ? ಅಲ್ಲಿ ಬೇರೆಯವರ ಸ್ಥಾನ-ಮಾನಗಳ ರಕ್ಷಣೆಗೆ ಹೋರಾಡಿದವನು, ಇಲ್ಲಿ ಕೈಹಿಡಿದವಳ,ಮಾನರಕ್ಷಣೆ ಮಾಡಲೂ ಕೈಲಾಗದಷ್ಟು ಕೀಳ್ದೆಸೆಗಿಳಿದು ಕೂಡುವಂತಾಯಿತೆ ?" ಎಂದು ಗೋಳಾಡುತ್ತಿದ್ದ.

× × × ×

ಸಂಕ್ರಾಂತಿ ಹಬ್ಬದ ದಿನ. ಮೂರ್ತಿಯ ಪುಟ್ಟ ತಂಗಿ ನಳಿನಿಯು ಅಂದು ಕಂಕುಳಲ್ಲೊಂದು ಪುಟ್ಟ ಬೊಂಬೆಯನ್ನೆತ್ತಿಕೊಂಡು ಬಂಧುಗಳ ಮನೆಗಳಿಗೆಲ್ಲ ಹೋಗಿ ಎಳ್ಳು ಬೀರುವ ಸಡಗರ. ಇದಕ್ಕೆ ನಾಲ್ಕೈದು ದಿನಗಳಿಂದ ಮನೆಯ ಹೆಂಗಸರು ಸಿದ್ಧತೆಗಳನ್ನು ಮಾಡಿಕೊಂಡು ಬಂದಿದ್ದರು. ಮಧ್ಯಾಹ್ನದ ಊಟವಾದಾಗಲಿಂದ ನಳಿನಿಗೆ ಅಲಂಕಾರ ಸಂಭ್ರಮದಿಂದ ಜರುಗಿತ್ತು. ಮೂರ್ತಿ ಈ ದೃಶ್ಯಗಳನ್ನೆಲ್ಲ ಮನಸ್ಸಿನಲ್ಲೇ ಕಲ್ಪಿಸಿಕೊಳ್ಳುತ್ತ ಮೌನದಿಂದ ಕುಳಿತು ಒಂದು ಬಗೆಯ ಆನಂದಾನುಭವದ ಸವಿಗಾಣುತ್ತಿದ್ದ. ಮೂರ್ತಿಯ ಕಡೆಯಿಂದ ಯಾವ ಬಗೆಯ ಕೂಗಾಟವೂ ಅಂದು ಆರಂಭವಾಗದಿದ್ದುದನ್ನು ಕಂಡು ರಾಜಿಯ ಮನವೂ ಹರ್ಷಿಸುತ್ತಿತ್ತು. ಇದರಿಂದ ಅವಳಿನ್ನಷ್ಟು ಉತ್ತೇಜಿತಳಾಗಿ ನಳಿನಿಯ ಅಲಂಕಾರಗಳಿಗೆ ಹೆಚ್ಚು ಮುತುವರ್ಜಿಯಿಂದ ಗಮನ

ಕೊಟ್ಟಿದ್ದಳು. ಕೊನೆಗೆ ಸಂಜೆ ನಳಿನಿಯನ್ನು ತಮ್ಮ ಬಂಧುಗಳ ಮನೆಗೆ ಎಳ್ಳು ಬೀರಲು ಕರೆದೊಯ್ಯಬೇಕಾಗಿ ಬಂದಾಗಲಂತೂ ಅವಳ ಸಂತೋಷಕ್ಕೆ ಪಾರವೇ ಇರಲಿಲ್ಲ. ಅವಸರವಾಗಿ ಹೆರಳು ಹಾಕಿಕೊಂಡು ಬೇರೊಂದು ಸೀರೆಯನ್ನುಟ್ಟುಕೊಳ್ಳುವ ಶಾಸ್ತ್ರಮುಗಿಸಿ ಕೈಯಲ್ಲೊಂದು ಅರಿಶಿನ-ಕುಂಕುಮ ಇತ್ಯಾದಿಗಳ ಬೆಳ್ಳಿಯ ತಟ್ಟೆಯನ್ನೆತ್ತಿಕೊಂಡಳು. ಸಕ್ಕರೆ ಅಚ್ಚು, ಕೊಬ್ಬರಿ ಬಟ್ಟಲುಗಳು ಕಬ್ಬಿನ ತುಂಡುಗಳು ತುಂಬಿದೊಂದು ಬುಟ್ಟಿಯೂ, ಎಳ್ಳಿನ ಪಾತ್ರೆಯೂ ಮನೆಯ ಆಳಿನ ಪಾಲಿಗೆ ಗಂಟುಬಿದ್ದವು. ಸರಿ! ಇನ್ನು ನಳಿನಿಯು ರಾಜಿಯ ಕೈಹಿಡಿದು, ಮನೆಯಿಂದ ಜಪಾನೀ ಬೊಂಬೆಯಹಾಗೆ ಮುದ್ದು ಮುದ್ದಾಗಿ ಹೊರಬಿದ್ದಳು.

ದಾರಿಯಲ್ಲಿ ಈ ಹೆಣ್ಣುಮಗುವಿನ ಅಲಂಕಾರವನ್ನೇ ಎಲ್ಲರೂ ನೋಡಿ ಬೆರಗಾಗುತ್ತಿದ್ದಾರೆಂದು ರಾಜಿ ಒಂದು ರೀತಿಯಲ್ಲಿ ಹೆಮ್ಮೆಪಟ್ಟುಕೊಂಡು ಮುಂದೆ ನಡೆದಿದ್ದಳು. ಈ ಜೋಡಿ ನಿಜವಾಗಿಯೂ ಜನರ ಮನವನ್ನಾಕರ್ಷಿಸುವಂತಿತ್ತು. ಅದರಂತೆಯೇ ನಾಲ್ಕಾರು ಮಂದಿ ರಸಿಕರ ತಂಡವೊಂದು ರಸ್ತೆಯ ಮಗ್ಗುಲಲ್ಲೇ ನಿಂತಿದ್ದುದು ಇವರನ್ನು ಹಿಂಬಾಲಿಸಿತು. ಅವರ ಮಾತುಗಳೂ ಒಂದು ವಿಕಟ ಸರಣಿಯಲ್ಲಿದ್ದು, ರಾಜಿಯ ಕಿವಿಗೆ ಬೀಳಲೆಂದೇ ಉದ್ದೇಶಪೂರ್ವಕವಾಗಿ ಗಟ್ಟಿಯಾಗಿದ್ದವು. ರಾಜಿಯು ಅಸಹ್ಯಗೊಂಡು ಕೊಂಚ ವೇಗವಾಗಿ ಮುನ್ನಡೆದು ನಳಿನಿಯನ್ನು ಹೆಚ್ಚುಕಡಿಮೆ ಎಳೆದೊಯ್ಯಲಾರಂಭಿಸಿದಳು. ಅವಳ ನಡಿಗೆಯ ಗತಿ ಹೆಚ್ಚಿದಂತೆ ಹಿಂಬಾಲಿಸುತ್ತಿದ್ದವರ ನಡಿಗೆಯ ವೇಗವೂ ಹೆಚ್ಚಲಾರಂಭಿಸಿತು. ರಾಜಿಯ ಮನೆಯ ಆಳು ಹಿಂದೆಬಿದ್ದ. ಅವನಿಗ್ಯಾವ ಆತುರವೂ ಇರಲಿಲ್ಲವಾದ್ದರಿಂದ ಅವನು ನಿಧಾನವಾಗಿಯೇ ನಡೆದು ಬರುತ್ತಿದ್ದ.

ರಾಜಿಯು ಚೌಕದಲ್ಲೊಮ್ಮೆ ನಿಂತು ಹಿಂದಕ್ಕೆ ಒಂದು ಬಾರಿ ತಿರುಗಿ, ಆಳಿಗೆ ಬೇಗ ನಡೆದುಬಾರೆಂದು ಕೂಗಿ ಹೇಳಿದಳು. ಹಿಂಬಾಲ

ಕರದನ್ನು ತಮಗಾಗೆಂದು ಬಗೆದು ಉತ್ಸುಕರಾಗಿ ಅವಳೆಡೆಗೆ ಬೇಗ ಮುಂದೆ ನಡೆದರು. ರಾಜಿಯು ಬೆದರಿದಳು.

ಚೌಕದಿಂದ ಅವಳು ಮುಂದುವರಿಯಬೇಕಾಗಿದ್ದ ರಸ್ತೆಯಲ್ಲಿ ಮಿಲಿಟರಿ ಲಾರಿಗಳು ಮೂರು ನಾಲ್ಕು ನಿಧಾನವಾಗಿ ತೆವಳಿಕೊಂಡು ಹೋಗುತ್ತಿದ್ದವು. ಒಂದು ಮಾತ್ರ ಚೌಕದಿಂದ ಸ್ವಲ್ಪದೂರದಲ್ಲಿ ರಸ್ತೆಯ ಒಂದು ಮಗ್ಗುಲಿಗೆ ನಿಂತುಬಿಟ್ಟಿತ್ತು. ಐದಾರು ಮಂದಿ 'ನೇಟಿವ್' ಸಿಪಾಯಿಗಳು ಅದರ ಮಗ್ಗುಲಿಗೆ ಬೀಡಿಸೇದುತ್ತ ನಿಂತಿದ್ದರು. ಅವರ ದರ್ಶನವಾದಮೇಲಂತೂ ರಾಜಿಯ ಧೈರ್ಯ ಗಾಳಿಯಲ್ಲಿ ತೂರಿ ಹೋಯಿತು. ಹಿಂಬಾಲಕರ ಹಿಂಸಾವಚನಗಳಿಗೆ ಬೆದರದಿದ್ದವಳು, ಪ್ರಜಾ ಪ್ರಭುತ್ವ-ರಾಷ್ಟ್ರಗಳ ಸ್ವತಂತ್ರ ಜನಾಂಗಗಳ ಅಮೂಲ್ಯ ಸ್ವಾತಂತ್ರ್ಯ ರಕ್ಷಣೆಯ ಸಂಗ್ರಾಮಕ್ಕೆ ಜೀವವನ್ನು ಮುಡಿಪಾಗಿಟ್ಟು ನಿಂತಿದ್ದ ದೇಶೀ ಸೈನಿಕರ ನಿಲುವನ್ನು ನೋಡಿ, ಆ ಜನರಹಿತ ರಸ್ತೆಯಲ್ಲಿ ಮುಂದಡಿಯಿಡಲು ಹೆದರಿದಳು. ಅವಳ ಅವಸರದ ನುಡಿಗೆ ಆಳು ಕಿವಿಗೊಡದೆ ಮಲೆನಾಡಿನ ಎಮ್ಮೆಯಂತೆ ಸಾವಧಾನವಾಗಿ ಬರುತ್ತಿದ್ದ.

ಆ ವೇಳೆಗೆ ಮುಂದೆ ನಿಂತಿದ್ದ ಮಿಲಿಟರಿ ಲಾರಿಯ 'ಎಂಜಿನ್' 'ಸ್ಟಾರ್ಟ್' ಆಯಿತು. ಅದರ ಶಬ್ದ ಕೇಳುತ್ತಲೇ, ಇನ್ನು ಆ ವಾಹನವೂ ಮುಂದೆ ಹೋಗಿ ಉಳಿದವುಗಳೊಡನೆ ಸೇರಿಕೊಳ್ಳುವುದೆಂದು ರಾಜಿಗೆ ಸ್ವಲ್ಪ ಧೈರ್ಯ ಬಂದಿತು. ಹಿಂಬಾಲಿಸುತ್ತಿದ್ದ ಗಂಡಸರೂ ಚೌಕವನ್ನು ಸೇರುತ್ತಲೇ, ಅವರಾದರೂ ನಾಲ್ಕು ಮಂದಿ ಗಂಡಸರು ಸುತ್ತಮುತ್ತ ಇರುವರಲ್ಲಾ ಎಂದು ಮನಸ್ಸು ಗಟ್ಟಿ ಮಾಡಿಕೊಂಡು ರಾಜಿಯು ಮುನ್ನಡೆದಳು. ಲಾರಿಯು ಶಬ್ದಮಾಡುತ್ತ ನಿಂತಲ್ಲೇ ನಿಂತಿದ್ದುದರಿಂದ, ನಡೆನಡೆಯುತ್ತ ಅದು ಹತ್ತಿರವಾದಂತೆಲ್ಲ ರಾಜಿಯ ಎದೆ ಡವಡವನೆ ಹೊಡೆದುಕೊಳ್ಳುತ್ತಿತ್ತು. ಆದರೂ ಹಿಂದೆ ಬರುತ್ತಿದ್ದವರು ಗಂಡಸರೆಂಬ ಧೈರ್ಯದಮೇಲೆ ಹೆಜ್ಜೆ ಮುಂದೆ ಹಾಕಿದಳು. ಲಾರಿಯ ಮಗ್ಗುಲಿಗಿದ್ದವರನ್ನೂ ಹಾದು ಸ್ವಲ್ಪಮುಂದೆ ಹೋದಳು.

ಲಾರಿಯು ಚಲಿಸಿತು. ಮೂರುಮಂದಿ ದೇಶೀ ಸೈನಿಕರು ಅನಾಮತ್ತಾಗಿ ರಾಜಿಯನ್ನು ಹಿಡಿದೆತ್ತಿ ಲಾರಿಯೊಳಗೆ ಹಾಕಿ ತಾವೂ ಹಿಂದೆಯೇ ಅದರೊಳಗೆ ಹಾರಿಕೊಂಡರು. ರಾಜಿಯ ಆರ್ತನಾದ ಸುತ್ತಲಿನ ಮೌನವನ್ನು ಭೇದಿಸಿಕೊಂಡೆದ್ದಿತು. ಲಾರಿಯು ಅತಿ ವೇಗವಾಗಿ ಮುಂದೋಡುತ್ತ ಹಿಂದೆ ಧೂಳಿನ ಪರದೆ ಎಳೆದು ಕಣ್ಮರೆಯಾಗಿ ಹೋಯಿತು. ಹಿಂಬಾಲಿಸಿ ಬರುತ್ತಿದ್ದ ಭೂಪತಿಗಳು ಬೆರಗಾಗಿ ನೋಡುತ್ತ ನಿಂತುಬಿಟ್ಟರು. ಅವರ ಗಂಡುತನಕ್ಕೆ ಒಂದು ಕ್ಷಣ ಪಾರ್ಶ್ವವಾಯು ಹೊಡೆದಂತಾಗಿತ್ತು. ರಾಜಿಯ ಕೈಲಿದ್ದ ಬೆಳ್ಳಿಯ ತಟ್ಟೆ, ಅದರಲ್ಲಿದ್ದ ಸಲಕರಣೆಗಳು ನೆಲದಮೇಲೆ ಚಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಅರಸಿನ - ಕುಂಕುಮಗಳು ಮಣ್ಣಿನೊಂದಿಗೆ ಬೆರೆತು ಹೋಗಿದ್ದವು. ಅವುಗಳೆಲ್ಲದರ ಮಗ್ಗುಲಿಗೆ ದಿಕ್ಕುತೋಚದೆ ನಳಿನಿಯು ಅಳುತ್ತ ನಿಂತಿದ್ದಳು. ಸ್ವಲ್ಪ ದೂರದಲ್ಲಿ ಆಳು ಬುಟ್ಟಿ, ಪಾತ್ರೆಗಳನ್ನು ಹೊತ್ತುಕೊಂಡೇ 'ಹಿಡಕೊಳ್ರೀ–ಹಿಡಕೊಳ್ರೀ' ಎಂದು ಅರಚುತ್ತ, ಏದುತ್ತ ಓಡಿಬರುತ್ತಿದ್ದ.

× × × ×

ರಾಜಿಯ ತವರುಮನೆಯವರಿಗೂ, ಅತ್ತೆಯ ಮನೆಯವರಿಗೂ ಈ ಘಟನೆಯಿಂದ ಸಂಕಟ ತಟ್ಟಿದರೂ, ಅದು ಇನ್ನೂ ಬಹಿರಂಗವಾಗಿ ಎಲ್ಲರ ಮುಂದೂ ಅವರು ಮುಂದಕ್ಕೆ ತಲೆತಗ್ಗಿಸುವಂತಾಗದಿರಲೆಂದು ಎರಡು ಕಡೆಯವರೂ ಮನೆತನದ ಮಾನ ಕಾಪಾಡಿಕೊಳ್ಳುವ ಹಂಬಲದಿಂದ ಪೋಲೀಸಿನವರ ತನಿಖೆಯೂ ಗುಟ್ಟಾಗಿ ನಡೆಯಲೆಂದಾಶಿಸಿದರು. ಸರಿ ! ಎಲ್ಲಕ್ಕೂ ರಹಸ್ಯದ ಮುಸುಕು ಬಿದ್ದಮೇಲೆ ಸತ್ಯವೆಲ್ಲಿಂದ ಹೊರಗೆ ಬರಬೇಕು ? ಒಂದೊಂದುಕಡೆ ಒಂದೊಂದು ಕತೆ ಹುಟ್ಟಿಕೊಳ್ಳುತ್ತಿತ್ತು; ಹಿಂದೆಯೇ ಅದಕ್ಕೆ ಬುಡವಿಲ್ಲವೆಂದೂ ತಿಳಿದುಬರುತ್ತಿತ್ತು. ಅಂತೂ ಒಟ್ಟಿನಲ್ಲಿ ರಾಜಿಯು ಪತ್ತೆಯೇ ಇಲ್ಲದಂತೆ ಅದೃಶ್ಯವಾಗಿ ಹೋಗಿ ನಾಲ್ಕು ದಿನ ಕಳೆದವು. ಇನ್ನು ಏನೇ ನೆರವು ಕೊಡಬಹುದಾದರೂ ಅದೆಲ್ಲ ನಿರುಪಯೋಗವೆನಿಸಿಕೊಳ್ಳುವಷ್ಟು ಕಾಲ ಕೇವಲ ಸಾಧಾರಣಾ

ವಾಗಿಯೇ ಕಳೆದುಹೋಯಿತೆಂದಮೇಲೆ ಯಾರಿಗೆ ಯಾರು ಯಾವ ರೀತಿಯಲ್ಲಿ ಸಹಾಯಮಾಡಬಹುದು? ಪೋಲೀಸಿನವರಾದಮಾತ್ರಕ್ಕೇ ಅವರೇನು ಬಹ್ಮನ ಅಪರಾವತಾರವೆ? ಸರಿ! ಏನಾದರೂ ಸುದ್ದಿ ಎಲ್ಲಿಂದಲಾದರೂ ಜನ ತಂದರೆ, ಅದರಮೇಲೆ ತನಿಖೆ ನಡೆಸುವ ನಿಜ ಭಕ್ತಿಯಿಂದ ತೆಪ್ಪನೆ ಕುಳಿತರು.

ಮೂರ್ತಿಯ ಮನೆಯನ್ನೆಲ್ಲಾ ಅದೇನೋ ಒಂದು ಅವರ್ಣ ನೀಯ ವಿಚಿತ್ರ ವಾತಾವರಣ ಆವರಿಸಿಬಿಟ್ಟಿದೆ. ಮನೆಯ ಮುಂಬಾಗಿಲು ಈಗ ಸದಾ ಮುಚ್ಚಿದೆ. ಮನೆಯೊಳಗೆ ಯಾರೂ ಯಾರೊಡನೆಯೂ ಮಾತನಾಡುವ ಗೋಜಿಗೆ ಹೋಗುತ್ತಿಲ್ಲ. ಮೂರ್ತಿಯ ಮೌನವ್ರತದ ಪ್ರಭಾವ ಎಲ್ಲರಿಗೂ ತಟ್ಟಿದಂತಿದೆ.

ರಾಜಿ ಕೈತಪ್ಪಿಹೋದಂದಿನಿಂದ ಇಂದಿನವರೆಗೆ ಮೂರ್ತಿಯು ತನ್ನ ಕೋಣೆಯ ಮಂಚದಮೇಲೆ ಮರದ ತುಂಡಿನಂತೆ ಅಲುಗಾಡದೆ ಬಿದ್ದಿದ್ದಾನೆ. ಒಂದು ಅಗಳು ಅನ್ನವಾಗಲೀ, ಒಂದು ತೊಟ್ಟು ನೀರಾಗಲಿ ಆವನ ಗಂಟಲಿನಲ್ಲಿ ಇಳಿದಿಲ್ಲ. ಅವನ ಮನೋರಂಗದಲ್ಲಿ ನಾಲ್ಕುದಿನದಿಂದ ಒಂದೇ ಒಂದು ದೃಶ್ಯ ನಿಂತುಬಿಟ್ಟಿತ್ತು. ಅದು ರಾಜಿಯ ಚಿತ್ರ! ಕೋಪಾವೇಶಗಳಿಂದ ಕೂಡಿ ಅವನೆಡೆ ನೋಡುತ್ತ, ಮೇಲಿಂದ ಮೇಲೆ 'ಹಿಂದೆ ನೀವಾಡಿದ್ದು ನೆನಪಿದೆಯೇ? ನಿಮ್ಮ ದೃಷ್ಟಿಯಲ್ಲಿ ನಾನೀಗ 'ಹಿರೋಯಿನ್' ಅಲ್ಲವೇನು, ಹೇಳಿ?' ಎಂದು ಅಣಕಿಸುತ್ತಿದ್ದಂತಿತ್ತು ರಾಜಿಯ ಆ ಚಿತ್ರ. ಸಾವನ್ನು ಬಯಸಿ ಬಯಸಿ ಅತ್ತು ಸೊರಗಿದ್ದ ಮೂರ್ತಿ; ಆದರೆ ಸಾವು ಬಯಸಿದಾಗ ಬಾರದು.

ಹೊರಗಡೆ ಅಂಗಳದಲ್ಲಿ ಅವನ ತಂದೆ ಯಾರೊಡನೆಯೋ ಮಾತನಾಡುತ್ತಿದ್ದಂತೆ ಅವನಿಗೆ ಕೇಳಿಬಂತು. 'ಕ್ಲೋಸ್ಪೇಟೆಯ ಬಳಿ ರಸ್ತೆಯ ಮಗ್ಗುಲಿಗೆ ಒಂದು ಹೆಂಗಸಿನ ಶವ ಬಿದ್ದಿದ್ದುದನ್ನು ಕಂಡುದಾಗಿ ಪೋಲೀಸರಿಗೆ ಯಾರೋ ಸುದ್ದಿ ಕೊಟ್ಟಿದ್ದರು. ಆ ಶವ ರಾಜಿಯದೇ ಅಲ್ಲವೇ ಎಂದು ಇತ್ಯರ್ಥಗೊಳಿಸುವುದಕ್ಕೆ ಮೂರ್ತಿಯ ತಂದೆ ಹೋಗ

ಬೇಕಾಗಿದೆಯೆಂಬುದೂ ಅವನ ಕಿವಿಗೆ ಬಿತ್ತು. ತಟ್ಟನೆ ಮನೋರಂಗದ ದೃಶ್ಯದಲ್ಲಿ ರಾಜಿಯ ನಿಲುವಿನ ಠೀವಿ ಬದಲಾಗಿತ್ತು. ಅಸ್ತವ್ಯಸ್ತ ಕೇಶರಾಶಿ. ಹರಿದ ಬಟ್ಟೆಗಳು. ಮೈಯೆಲ್ಲ ರಕ್ತದ ಕಲೆಗಳು. ಕಣ್ಣುಗಳಲ್ಲಿ ಭೀತಿಯೊಂದೇ ಎದ್ದು ಕಾಣುತ್ತಿದೆ. ಒಂದಿಗೇ ಮುಖದಲ್ಲಿ ದೈನ್ಯತೆ ಮೂಡಿದೆ........ರಾಜಿ ಕೈಮುಗಿದು ಯಾರನ್ನೋ ಅಂಗಲಾಚಿ ಬೇಡಿಕೊಳ್ಳುತ್ತಿದ್ದಾಳೆ.

'ರಾಜಿ! ರಾಜಿ ಅಳುತ್ತಿದ್ದಾಳೆ; ರಾಜಿ ಅಳುತ್ತಿದ್ದಾಳೆ' ಎಂದು ಮೂರ್ತಿ ಅರಚಿಕೊಂಡಿದ್ದ. ಎದ್ದು, ಅವಳ ಸಹಾಯಕ್ಕೆಂದು ಮುಂದೆ ನುಗ್ಗಿದ. ತಾನು ಕುಂಟು ಕುರುಡನೆಂಬುದೇ ಅವನಿಗೆ ಮರೆತು ಹೋಗಿತ್ತು. ಧಡಾರನೆ ನೆಲಕ್ಕುರುಳಿಬಿದ್ದ. ಬೀಳುವಾಗ ತಲೆ ಮೇಜಿನ ಅಂಚಿಗೆ ಹೊಡೆದು ತೂತುಬಿತ್ತು. ಬಿದ್ದವನು ಬಹುಕಾಲ ಮೇಲೇಳಲಿಲ್ಲ.



# ತೊಡಕಿನ ಬಾಳು

ಒಂದು ದಿನ ನಮ್ಮೂರಿನಿಂದ ಬಂದಿದ್ದವರೊಂದಿಗೆ ಹುಚ್ಚಾಸ್ಪತ್ರೆಗೆ ಹೋಗಿ ಬರಬೇಕಾಯ್ತು. ಅಲ್ಲಿದ್ದ ಅನೇಕ ಬಗೆಯ ಜನರನ್ನೂ, ಅವರ ವಿಚಿತ್ರ ನಡೆ–ನುಡಿಗಳನ್ನೂ ನೋಡಿ 'ನಮ್ಮಲ್ಲಿ ಯಾರು ಹುಚ್ಚರು! ನಾವೋ ಅವರೋ?' ಎಂಬ ಪ್ರಶ್ನೆಯೊಂದು ನನ್ನ ಮನಸ್ಸಿನಲ್ಲಿ ಹುಟ್ಟಿದುದು ಇನ್ನೂ ಅದು ಪ್ರಶ್ನೆಯಾಗಿಯೇ ಉಳಿದಿದೆ. ಕಾರಣ, ಪ್ರಪಂಚದ ಅರ್ಧ ಜನರೆಲ್ಲಾ ಉಳಿದರ್ಧವನ್ನು ಹುಚ್ಚರೆಂದು ಭಾವಿಸುವುದು. ಹೀಗೆ ಯೋಚಿಸುತ್ತ ಹೋದರೆ ನಮ್ಮ ಬಾಳುವೆಯೇ ಬಹಳ ತೊಡಕಿನದೆಂದು ಭಾಸವಾಗುತ್ತದೆ. ಆಗ ನಾನೇನೋ ಯೋಚನೆಯಲ್ಲಿ ಮೈಮರೆಯುವಷ್ಟರಲ್ಲೇ ಒಬ್ಬ ಯುವಕನು ನನ್ನನ್ನುದ್ದೇಶಿಸಿ "ಸ್ವಾಮಿ........?" ಎಂದ. ಆತನ ಕಡೆ ತಿರುಗಿ "ಏನು?" ಎಂದೆ. "ನನ್ನ ಚೆನ್ನಾಗಿ ನೋಡಿ ಹೇಳಿ ಸ್ವಾಮಿ, ನಾನು ಹುಚ್ಚನ ಹಾಗೆ ಕಾಣಿಸುತ್ತೇನೆಯೇ?" ಎಂದ ಆತ. ಆತನು ಹಾಗೆ ಕೇಳದಿದ್ದರೆ ನಾನಾತನನ್ನು ಖಂಡಿತವಾಗಿಯೂ ಹುಚ್ಚನೆಂದು ಹೇಳುತ್ತಿರಲಿಲ್ಲ. ಆದರೂ ಆತನು ಹಾಗೆ ಕೇಳಿದಮೇಲೆ ಖಚಿತವಾಗಿ ಹೇಳಲಾರದಾದೆ. ಒಂದು ಬಾರಿ ಆತನ ತೀಕ್ಷ್ಣ ದೃಷ್ಟಿಯು ನನ್ನನ್ನು ಅಧೀರನನ್ನಾಗಿ ಮಾಡಿತು. ಕ್ಷಣಕಾಲ ಸುಮ್ಮನಿದ್ದು ಅನಂತರ "ಇಲ್ಲ, ನನಗೆ ನೀವು ಹುಚ್ಚರೆಂದು ತೋರುವುದಿಲ್ಲ"ವೆಂದು ಹೇಳಿದೆ. ಅದನ್ನು ಕೇಳಿದ ಆತನ ಮುಖವು ಆನಂದದಿಂದರಳಿತು. ನಾನೂ ಅದೇ ಸಮಯವೆಂದು ಕದಲಲೆತ್ನಿಸಿದೆ. ಆದರೆ ಆತನು ನನ್ನನ್ನು ಹೋಗಗೊಡದೆ "ಸ್ವಾಮಿ, ಆ ಮಾತನ್ನು ಹೇಳಿದವರಲ್ಲಿ ನೀವೊಬ್ಬರು ಮಾತ್ರವೇ ಅನುಮಾನಿಸಿ ನುಡಿದವರು. ನನ್ನ ಕಥೆಯನ್ನು ಕೇಳಿ, ನಿಮ್ಮ ಅನುಮಾನವು ಪರಿಹಾರವಾಗಿ ನಿಮ್ಮ ಹೇಳಿಕೆಯು ಸತ್ಯವೆಂದು ನಿಮಗೇ ತಿಳಿದು ಬಂದರೆ ನನಗೊಂದುಪಕಾರ ಮಾಡುವಿರಾ?" ಎಂದ. ನಿರ್ವಾಹವಿಲ್ಲದೆ ನಾನು ಆಗಲೆಂದೊಪ್ಪಿಕೊಂಡೆ.

ಆತನು ತನ್ನ ಕಥೆಯನ್ನು ಮೊದಲು ಮಾಡಿದ. ನಾನು ' ಹೂಂ ' ಗುಟ್ಟುತ್ತ ಕೇಳುತ್ತಿದ್ದೆ.

" ನಮ್ಮ ಮನೆ ಇದ್ದುದು ಒಂದು ದೊಡ್ಡೂರಿನಲ್ಲಿ. ದೊಡ್ಡೂರಿಗೆ ತಕ್ಕಹಾಗೆ ದೊಡ್ಡ ಮನೆ ನಮ್ಮದು. ನಮ್ಮ ತಂದೆ ಮಾಡಿಟ್ಟಿರುವ ಆಸ್ತಿಯೆಲ್ಲಾ ಅವರ ಸ್ವಯಾರ್ಜಿತವೇ! ನಮ್ಮ ತಾಯಿಯ ವಿಷಯ ವಾಗೇನೂ ಹೇಳಬೇಕಾದ್ದೇ ಇಲ್ಲ. ಅವರು ತಾಯಿಯಹಾಗೇ ಇದ್ದರು. ನಾವು ಅಣ್ಣ ತಮ್ಮಂದಿರು ಮೂರು ಜನ. ನಮ್ಮ ದೊಡ್ಡಣ್ಣನಿಗೂ ನಮಗೂ ಮೂರು ವರ್ಷ ಹೆಚ್ಚು ಕಡಿಮೆ; ಅಂದರೆ ನಮ್ಮ ದೊಡ್ಡಣ್ಣನು ಹುಟ್ಟಿದ ೩ ವರ್ಷಕ್ಕೆ ನಾವಿಬ್ಬರೂ (ಅವಳಿ ಜವಳಿ ಮಕ್ಕಳು) ಒಟ್ಟಿಗೇ ಹುಟ್ಟಿದೆವಂತೆ. ನಮ್ಮಿಬ್ಬರಿಗೂ ರಾಮ-ಲಕ್ಷ್ಮಣ ಎಂದು ಹೆಸರಿಟ್ಟರು. ಅದಕ್ಕೆ ಕಾರಣ ನನಗೂ ರಾಮೂಗೂ ರೂಪಿನಲ್ಲಿ ಏನೂ ವ್ಯತ್ಯಾಸ ವಿಲ್ಲದ್ದು. ಒಂದು ಗುರುತಿನ ಮೇಲೆ ಮಾತ್ರ ನಾವು ಯಾರೆಂದು ಪತ್ತೆ ಮಾಡಬಹುದಾಗಿತ್ತೇ ಹೊರ್ತು ಮತ್ತೆ ಮಾತಿನಲ್ಲಾಗಲೀ (ಬಾಲ್ಯದಲ್ಲಿ) ಯಾವ ಬಗೆಯಲ್ಲೂ ಸಾಧ್ಯವಿರಲಿಲ್ಲ. ಆ ಗುರುತು ನನ್ನ ಬೆನ್ನಮೇಲಿದ್ದ ಹಸುರು ಮಚ್ಚೆಯೊಂದು. ಅದು ರಾಮೂಗೆ ಇರಲಿಲ್ಲ. ನಾವು ಬೆಳೆದು ದೊಡ್ಡವರಾದೆವು. ನಮ್ಮ ತಾಯಿಯು ನಮ್ಮನ್ನು ಅತಿ ಪ್ರೀತಿಯಿಂದ ಬೆಳೆಸಿದರು. ದೊಡ್ಡವರಾದ ಮೇಲೆ ನಮ್ಮ ನಮ್ಮಲ್ಲಿದ್ದ ಭಿನ್ನರುಚಿಗಳು ಕಂಡು ಬಂದುವು. ಅವನಿಗೆ ಸಂಗೀತವೆಂದರೆ ಸೇರುತ್ತಿರಲಿಲ್ಲ. ನನಗೆ ಸಂಗೀತವೆಂದರೆ ಪ್ರಾಣ ನನ್ನ ಕಂಠವು ಚೆನ್ನಾಗಿದೆಯೆಂದು ನನ್ನ ಹಾಡನ್ನು ಕೇಳಿದವರೆಲ್ಲರೂ ಹೇಳುತ್ತಿದ್ದರು. ಯಾವುದಾದರೂ ವರ್ಣವಾಗಲೀ ಕೀರ್ತನೆಯಾಗಲೀ ಕೇಳಿ ಮನಸ್ಸು ಬಿದ್ದರೆ, ವಿಶ್ವ ಪ್ರಯತ್ನ ಮಾಡಿ ಅದರ ಸಾಹಿತ್ಯ ಸಂಪಾದಿಸಿ, ಕೇಳಿ, ಕಲಿತು ಹಾಡಿ ಬಿಡುತ್ತಿದ್ದೆ. ರಾಮೂಗೆ ಒಳ್ಳೆಯ ಕಂಠವಿದ್ದರೂ ಅವನು ಹಾಡುತ್ತಲೇ ಇರಲಿಲ್ಲ. ನಮ್ಮ ತಂದೆಗೂ ಸಂಗೀತಕ್ಕೂ ಬಹಳ ದೂರ ಅವರ ದೃಷ್ಟಿಯಲ್ಲಿ ಸಂಗೀತಗಾರರೆಲ್ಲರೂ ಪೋಲಿಗಳೆಂದು. ನಮ್ಮ ತಾಯಿಗೆ

ಮಾತ್ರ ಸಂಗೀತದ ಮೇಲೆ ಮಮತೆ. ಆದ್ದರಿಂದ ನನ್ನನ್ನು ಆಗಾಗ ಹಾಡೆಂದು ಹೇಳಿ ನನಗೆ ಉತ್ತೇಜನ ಕೊಡುತ್ತಿದ್ದರು. ರಾಮೂ ಹಾಡನೆಂದು ನಮ್ಮ ತಾಯಿಗೂ ಗೊತ್ತಿರಲಿಲ್ಲ ಅವನು ತಾಯಿಯ ಬಳಿ ಅಷ್ಟು ಸೇರುತ್ತಲೂ ಇರಲಿಲ್ಲ. ಈ ಭೇದಭಾವನೆಯು ರಾಮೂಗೂ ನನಗೇ ಗೊತ್ತಿದ್ದ ವಿಷಯ ಅದನ್ನು ನಾವು ನಮ್ಮ ನಮ್ಮಲ್ಲೇ ಚರ್ಚಿಸಿ ಸುಮ್ಮನಾಗುತ್ತಿದ್ದೆವು.

ಮತ್ತೊಂದು ವಿಶೇಷವೇನೆಂದರೆ—ನಮ್ಮಿಬ್ಬರಲ್ಲಿ ಯಾರೊಬ್ಬರು ದೇಹಾಲಸ್ಯವಾಗಿ ಮಲಗಿದ್ದರೆ ಮತ್ತೊಬ್ಬನು ಅವನಿಗೆ ಮೇಲಾಗುವವರೆಗೂ ಸಂಕಟದಿಂದ ಒದ್ದಾಡುತ್ತಿದ್ದನು. ಒಬ್ಬನಿಗೆಲ್ಲಾದರೂ ಘಾಯವಾದರೆ, ಮತ್ತೊಬ್ಬನಿಗೆ ಅದೇ ಸ್ಥಳದಲ್ಲಿ ನೋವು ಕಾಣುತ್ತಿತ್ತು. ನನ್ನ ಕನಸಿನಲ್ಲಿಂದಾದರೂ ಅವನನ್ನು ಕಂಡರೆ ಅವನಿಂದ ನಾನೇನಾದರೂ ಒಳ್ಳೆಯ ಸುದ್ದಿಯಾಗಲೀ ಕೆಟ್ಟುದಾಗಲೀ ಕೇಳುತ್ತಿದ್ದೆ. ಅವನಿಗೂ ಹೀಗೆಯೇ ಆಗುತ್ತಿದ್ದಿತು. ಈ ವಿಚಿತ್ರ ಅನುಭವದ ಕಾರಣವು ನಮಗೆ ಎಂದೂ ಗೊತ್ತಾಗುತ್ತಿಲಿಲ್ಲ.

ಒಂದಿಗೇ ಬೆಳೆದೆವು. ಒಂದಿಗೇ ಓದಿ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದೆವು. ನಮಗೆ ಮೆಟ್ರಿಕ್ ಪರೀಕ್ಷೆಯು ಮುಗಿದು ರಜಾಕಾಲ ಬಂದಿತು. ಒಂದು ದಿನ ಸಂಗೀತದ ಮೇಲೆ ನನಗೂ ರಾಮೂಗೂ ದೊಡ್ಡ ಚರ್ಚೆಯಾಯಿತು. ಆಗ ರಾಮೂಗೆ ನಾನು ಬೊಂಬಾಯಿಗೆ ಹೋಗಿ ಸಂಗೀತ ಕಲಿಯಬೇಕೆಂದು ಹೇಳಿ, ಅದಕ್ಕವನು ಸಹಾಯ ಮಾಡಬೇಕೆಂದು ಕೇಳಿದೆ. ರಾಮೂ ಒಪ್ಪಿಕೊಂಡ. ನಮ್ಮ ತಾಯಿಯನ್ನು ಕಂಡು ನನ್ನ ಆಶೆಯನ್ನು ಹೇಳಿದೆ. ಅವರು ದೊಡ್ಡಣ್ಣನಿಗೆ ಹೇಳಿದರು. ಅವನೂ ನನಗೆ ಹಣ ಸಹಾಯಮಾಡಲೊಪ್ಪಿಕೊಂಡ. ನಮ್ಮ ತಂದೆಯು ಸಂಗೀತವನ್ನೇ ದ್ವೇಷಿಸುತ್ತಿದ್ದುದರಿಂದ ಅವರನ್ನು ಕೇಳುವ ಹಾಗಿರಲಿಲ್ಲ. ನಮ್ಮಣ್ಣನು ಹಣ-ಕಾಸು-ಮನೆಯ ಆಡಳಿತವೆಲ್ಲವನ್ನೂ ನೋಡುತ್ತಿದ್ದುದರಿಂದ ನನಗವನ ಸಹಾಯ ಮಾತ್ರ

ಬೇಕಾಗಿತ್ತು. ನಮ್ಮ ತಾಯಿಯ ಮಾತನ್ನವನು ಮೀರುವ ಹಾಗೇ ಇರಲಿಲ್ಲ.

ಸರಿ, ಹಣ ತೆಗೆದುಕೊಂಡು ಒಂದು ದಿನ ರಾಮೂ ಸಂಗಡ ಸ್ಟೇಷನ್‌ಗೆ ಹೋಗಿ ಅಲ್ಲಿಂದ ಹಾಗೇ ಬೊಂಬಾಯಿಗೆ ಹೊರಟೆ. ಹೋಗುವಾಗ ರಾಮೂ ಕಣ್ಣೀರಿಟ್ಟುಕೊಂಡು ಆಗಾಗ್ಗೆ ತಪ್ಪದೆ ಕಾಗದ ಹಾಕುತ್ತಿರೆಂದು ಬೀಳ್ಕೊಟ್ಟ. ಅಷ್ಟು ವರ್ಷಗಳಿಗೆ ನಾವು ಅಗಲಿದ್ದು ಅದೇ ಮೊದಲು. ನನಗೂ ವ್ಯಥೆಯಾಯ್ತು. ಆದರೆ ಬೊಂಬಾಯಿಗೆ ಪ್ರಯಾಣ—ಸಂಗೀತ ವಿದ್ಯಾರ್ಜನೆಯ ಆಸೆಯಲ್ಲಿ ಅದು ಅರ್ಧ ಮುಚ್ಚಿಹೋಯಿತು. ಗಾಡಿಯು ಹೊರಟೇ ಬಿಟ್ಟಿತು. ರಾಮೂ ದೂರ ವಾಗುತ್ತ ಆಗುತ್ತ ಕೊನೆಗೆ ಕಾಣದಂತಾದ. ಆಗ ಏಕೋ ಮನ ಮಳುಕಿತು.

× × × ×

ಒಬ್ಬ ಉತ್ತಮ ಗವಯ್ಯಾಯ ಬಳಿ ವಿದ್ಯಾರ್ಜನೆ ಮಾಡಿದ್ದಾಯ್ತು. ಆತನಿಂದಲೇ ಗಣ್ಯನೂ ಆದೆ. ಅನೇಕ ದೊಡ್ಡ ದೊಡ್ಡ ಮನುಷ್ಯರ ಮನೆಗಳಲ್ಲೆಲ್ಲಾ ಕಛೇರಿಯಾಗುತ್ತಿತ್ತು. ಅವರಲ್ಲಿ ಕೆಲವರಿಗೆ ನನ್ನ ಮೇಲೆ ಬಹಳ ವಿಶ್ವಾಸವುಂಟಾಗಿ ಅವರು ನನ್ನನ್ನು ಆಗಾಗ ತಮ್ಮ ಮನೆಗೆ ಕರೆಸಿಕೊಳ್ಳುತ್ತಿದ್ದರು. ಅವರ ಅತಿಥಿಯಾಗಿ ಅನೇಕ ದಿನಗಳು ಅವರ ಮನೆಯಲ್ಲೇ ನಿಲ್ಲಿಸಿಕೊಳ್ಳುತ್ತಿರಲು ನಾನು ಅವರ ಮನೆಯವರಲ್ಲಿ ಒಬ್ಬನಾದೆ. ಸಲಿಗೆಯು ಹೆಚ್ಚಿದಂತೆಲ್ಲಾ ಹೆಂಗಸರ ಆಟದ ಬೊಂಬೆ ಯಾಗಿ ಅಡ್ಡಹಾದಿ ತುಳಿದು ನಾನು ಮಾಡುತ್ತಿದ್ದ ಕಾರ್ಯದ ಪರಿವೆಯೇ ನನಗಿಲ್ಲದಂತಾಯ್ತು. ಪರಸ್ತ್ರೀಯರೆಂಬ ಭಾವನೆಯೇ ಹೋಗಿ, ಎಲ್ಲಿ ಕಾಲಿಟ್ಟರಲ್ಲಿ ಸ್ತ್ರೀಯರನ್ನು ಮರುಳು ಮಾಡಿ ನನ್ನ ಕಾಮವನ್ನು ಸುಡುತ್ತಿದ್ದೆ. ಸ್ತ್ರೀಯರು ನನ್ನ ಬಲೆಗೆ ಬಿದ್ದಂತೆಲ್ಲಾ ನನ್ನ ಕಾಮದ ಬೆಂಕಿಗೆ ತುಪ್ಪ ಸುರಿದಂತಾಗುತ್ತಿತ್ತೇ ಹೊರ್ತು ಅದು ಶಮನವಾಗುತ್ತಿರಲಿಲ್ಲ. ಕೊನೆಕೊನೆಗೆ ನನ್ನ ಸಂಗೀತ ವಿದ್ಯೆಯು

ಸುಂದರ ಸ್ತ್ರೀಯರ ಮನವೊಲಿಸಿಕೊಳ್ಳುವ ದುರ್ಗತಿಗಿಳಿಯಿತು. ಈ ಮಧ್ಯೆ ಊರಿಗೆ ಕಾಗದ ಹಾಕುವುದು ಸಂಪೂರ್ಣವಾಗಿ ನಿಂತೇ ಹೋಯ್ತು.

× × × ×

ಒಂದು ದಿನ ನನ್ನ ಹೋಟಲಿನ ಮ್ಯಾನೇಜರು ೮ ಕಾಗದಗಳನ್ನು ಕೈಯಲ್ಲಿಟ್ಟನು. ಅಂದಿಗೆ ನನ್ನ ಹೋಟಲಿಗೆ ನಾನು ಬಂದು ೨೦ ದಿನಗಳಾಗಿದ್ದುವು. ಎಲ್ಲ ಕಾಗದಗಳೂ ರಾಮುವಿನಿಂದ ಬಂದಿದ್ದುವು. ಅವುಗಳಲ್ಲಿ ಒಂದು ಕೊನೆಯದು "ಅವನು ಬೊಂಬಾಯಿಗೆ ನನ್ನನ್ನು ಕಾಣಲು ಬರುವುದಾಗಿಯೂ ಸ್ಟೇಷನ್ನಿಗೆ ಬಂದು ಅವನನ್ನು ನೋಡಬೇಕೆಂದೂ" ಬರೆದಿದ್ದನು. ಅಂದೇ ಅವನು ಬರಬೇಕಾದ ದಿನ. ಗಾಡಿ ಬರಲಿನ್ನೂ ಒಂದು ಘಂಟೆಯಿತ್ತು. ಅವನು ಬರುವುದೊಂದು ಸಂತೋಷ ಸುದ್ದಿಯಾಗಿದ್ದರೂ ನನ್ನ ಕಾರ್ಯಗಳಿಗೆಲ್ಲಾ ಅವನು ವಿಘ್ನವಾಗುವನಲ್ಲಾ ಎಂಬುದೊಂದು ಕೊರತೆ. ಅಂದಿನ ರಾತ್ರಿ ಒಬ್ಬರ ಮನೆಯಲ್ಲಿ ಔತಣವಿತ್ತು. ಹೋಗದಿದ್ದರೆ ಆಕೆ ಬಹಳ ಕೋಪಮಾಡಿಕೊಳ್ಳುವರು. ಏನು ಮಾಡುವುದು ? ರಾಮು ಒಳ್ಳೆಯ ವಿಘ್ನ ವಿನಾಯಕನಾದನಲ್ಲಾ ಎನಿಸಿತು. ಸಾಲದ್ದಕ್ಕೆ ಬೊಂಬಾಯಿನಲ್ಲೆಲ್ಲಾ ಕೋಮುವಾರು ಕಲಹಗಳು ಜೋರು. ಎಚ್ಚರಿಕೆಯಿಂದ ಓಡಾಡದಿದ್ದರೆ, ಮರಣ ಸಿದ್ಧ ! ರಾಮು ಬೊಂಬಾಯಿಗೆ ಹೊಸಬ. ಒಳ್ಳೆಯ ಹಿಂಸೆ ಬಂತು.

ಸ್ಟೇಷನ್ನಿಗೆ ಹೋಗಿ ರಾಮೂನ ಎದುರುಗೊಂಡು ಕರೆತಂದೆ. ಬಹಳ ದಿನಗಳೇನು ೩ ವರ್ಷಗಳಾಗಿದ್ದುವು. ಒಬ್ಬರನ್ನೊಬ್ಬರು ನೋಡಿದ ಸಂತೋಷದಿಂದ ಮಾತೇ ಹೊರಡದು. ಹೋಟಲಿಗೆ ಬಂದೆವು. ರಾತ್ರಿಯ ಔತಣದೂಟ—ಆಕೆ–ಎಲ್ಲವೂ ಮರತೇಹೋಯ್ತು.

ರಾತ್ರಿಯೆಲ್ಲಾ ಮಾತು-ಮಾತಿನಲ್ಲೇ ಕಾಲ ಕಳೆದೆವು. ರಾಮು ಮನೆಯ ಸುದ್ದಿಯೆಲ್ಲವನ್ನೂ ಹೇಳಿದ. ಮಧ್ಯೆ ತನಗೆ ಮದುವೆಯಾಗಿ

ಹೆಂಡತಿಯು ಮನೆಗೆ ಬಂದ ವಿಷಯವನ್ನೂ ಹೇಳಿದ. ಹೆಂಡತಿಯ ವರ್ಣನೆಯೂ ಬಹಳ ಚೆನ್ನಾಗಿ ನಡೆಯಿತು. ಬಹಳ ರೂಪವಂತೆ-ಗುಣವಂತೆ-ತನ್ನನ್ನು ಬಹು ಪ್ರೀತಿಸುತ್ತಾಳೆ—ತಾನೂ ಅವಳನ್ನು ಅತಿಯಾಗಿ ಪ್ರೀತಿಸುತ್ತಾನೆಂದೂ ಹೇಳಿದ. ಅವನ ಪತ್ನೀ ಪ್ರೇಮವು ಅಷ್ಟಿಷ್ಟಲ್ಲ. ಎಲ್ಲವನ್ನೂ ಹೇಳಿದ್ದಾದ ಮೇಲೆ ನಾನು ಕಾಗದಗಳನ್ನೇಕೆ ಸರಿಯಾಗಿ ಹಾಕುತ್ತಿರಲಿಲ್ಲವೆಂದು ಪ್ರಶ್ನೆ. ಏನೋ ಕೆಲಸ ಹೆಚ್ಚೆಂದು ನೆವ ಹೇಳಿ ನಿದ್ದೆಯ ಸೋಗು ಹಾಕಿ ಮಲಗಿದೆ.

ಒಂದು ತಿಂಗಳ ಕಾಲ ರಾಮೂಗೆ ಇಲ್ಲದ ನೆವ ಹೇಳಿ ತಪ್ಪಿಸಿಕೊಂಡು ಹೊರಗೆ ಹೊರಟು ೪-೫ ದಿನಗಳಿಗೊಂದು ಸಲ ಅವನಿಗೆ ಮುಖ ತೋರಿಸಿ ಹಾರಿಬಿಡುತ್ತಿದೆ. ಅವನಿಗೆ ಬಹಳ ವ್ಯಥೆಯಾಗುತ್ತಿತ್ತು. ಆದರೆ ಏನುಮಾಡುವುದು ? ಯಾರ್‍ಯಾರೋ ದೊಡ್ಡ ಮನುಷ್ಯರು ಔತಣಕ್ಕೆ ಹೇಳಿ ಮನೆಯಲ್ಲಿ ನಿಲ್ಲಿಸಿಕೊಂಡರೇನು ಮಾಡಲಾದೀತು ?

ಒಂದು ದಿನ ಹೋಟಲ್ ಪ್ರೊಪ್ರೈಟರಿಂದ ನನ್ನ ಚರಿತ್ರೆ ರಾಮೂಗೆ ತಿಳಿಯಿತು. ಅಂದಿನಿಂದ ನನ್ನ ಬರುವಿಕೆಗೆ ಕಾದಿದ್ದು ಒಂದು ದಿನ ನಾನು ಹೊರಟಾಗ, ನನಗೆ ತಿಳಿಯದಂತೆ ನನ್ನನ್ನೇ ಹಿಂಬಾಲಿಸಿ—ನಾನು ಹೋದ ಮನೆಯ ಗುರುತಿಟ್ಟುಕೊಂಡು—ಹಿಂತಿರುಗಿ ಹೋಗಿದ್ದಾನೆ. ಮಾರನೇ ದಿನವೂ ನಾನು ಬರದಿರಲು—ಅಲ್ಲಿಗೇ, ಆಕೆಯ ಮನೆಗೆ ಹುಡುಕಿಕೊಂಡು ಬಂದ.

ಅಲ್ಲಿ ಆಕೆಯು ನನ್ನೊಡನೆ ವರ್ತಿಸುತ್ತಿದ್ದುದನ್ನು ನೋಡಿ ಅವನಿಗೆ ಎದೆಯೊಡದಿರಬೇಕು. ನನ್ನನ್ನು ಹೊರಟು ಬಾರೆಂದ. ನನಗೆ ಕೋಪ ಬಂತು. ಮೊದಲನೆಯ ಬಾರಿ—ಅಷ್ಟು ವರ್ಷಗಳಿಗೆ-ಮೊದಲನೆ ಬಾರಿ ಅದೇ ಅವನ ಸಂಗಡ ಜಗಳವಾಡಿದೆ. ಅವನು ನಿರಾಶನಾಗಿ ಹೊರಟ. ನಾನಲ್ಲಿಯೇ ಉಳಿದೆ. ನನ್ನಾಕೆಯ ಮೇಲಿನ ಮೋಹವು ನನ್ನನ್ನು ಆ ಆಳಕ್ಕೆಳೆಯಿತು. ಅಲ್ಲಿಯೇ ಉಳಿದರೂ ನನ್ನ ಮನಸ್ಸಿಗೆ ಸಮಾಧಾನವಿರಲಿಲ್ಲ. ರಾಮುವು ನೊಂದು ಅಸ್ಥಿರನಾಗಿರಲು ನನಗೆಲ್ಲಿಯ ಸಮಾಧಾನ.

ಸ್ವಲ್ಪ ಕಾಲ ಕಳೆಯಿತು. ಆಕೆಯು ನನ್ನ ಮನವೊಲಿಸಿಕೊಳ್ಳ ಲೆಷ್ಟು ಪ್ರಯತ್ನಿಸಿದರೂ ಸಫಲಳಾಗಲಿಲ್ಲ. ರಾಮೂಗೂ ನನಗೂ ಆಗುತ್ತಿದ್ದ ಆ-ವಿಚಿತ್ರಾನುಭವವು ಅವಳಿಗೆ ಹೇಗೆ ಗೊತ್ತಾಗಬೇಕು?

ಇದ್ದಕ್ಕಿದ್ದಂತೆ ನನ್ನ ಬೆನ್ನಿನಲ್ಲಿ ತಡೆಯಲಾಗದ ಬೇನೆಯು ಹುಟ್ಟಿತು. ಚೀರಿದೆ. ಪಲ್ಲಂಗದಮೇಲೆ ಬಿದ್ದು ಹೊರಳಾಡಿದೆ; ಆ ಮೇಲೆ ಸ್ವಲ್ಪ ಬೇನೆ ಕಡಿಮೆಯಾಯಿತು. ರಾಮುವಿಗೇನಾಯಿತೋ ಎಂದು ಕಳವಳಗೊಂಡೆ. ಟೆಲಿಫೋನಿನ ಮೂಲಕ ಹೋಟಲಿನಲ್ಲಿ ವಿಚಾರಿಸಿದೆ. ರಾಮು ಅಲ್ಲಿಗಿನ್ನೂ ಬಂದಿರಲಿಲ್ಲ. ಕಳವಳವಿನ್ನೂ ಹೆಚ್ಚಾಯಿತು. ಹೋಟಲಿಗೋಡಿ ಅಲ್ಲಿ ಕಾದೆ. ರಾತ್ರಿಯೆಲ್ಲಾ ಕಾದರೂ ರಾಮು ಬರಲಿಲ್ಲ. ಭಯವಾಯಿತು. ಏನೋ ಅನಾಹುತವಾಗಿರಬೇಕು. ಇಲ್ಲ ದಿದ್ದರೆ ಹಿಂದಿನ ರಾತ್ರಿ ನನಗಾದ ಬೇನೆಯ ಉದ್ದಿಶ್ಯವೇನು? ಯಾವುದೂ ಬಗೆ ಹರಿಯಲಿಲ್ಲ ಪುನಃ ಆಕೆಯ ಮನೆಗೆ ಹೋದೆ.

ಬೆಳಿಗ್ಗೆ ೮|| ಘಂಟೆಯ ವೇಳೆಗೆ ಜೆ. ಜೆ. ಆಸ್ಪತ್ರೆಯಿಂದ ಟೆಲಿಫೋನ್ ಕಾಲ್ ಬಂತು. ರಾಮು ಆಸ್ಪತ್ರೆಯಿಂದ ಕರೆಸಿದ್ದ. ಬೆನ್ನಿನಲ್ಲಿ ಚೂರಿ ಚುಚ್ಚಿದ ಘಾಯ. ಬದುಕುವಹಾಗಿಲ್ಲವೆಂದು ತಿಳಿಯಿತು. ಕೂಡಲೇ ಆಸ್ಪತ್ರೆಗೋಡಿದೆ.

\+ × × +

ಆ ದೃಶ್ಯವನ್ನು ನೋಡಿದಾಗ ದುಃಖದಿಂದ ಮೈಮರತೆ ರಾಮು ವಿನ ಮುಖವು ಬಿಳುಪೇರಿದ್ದಿತು. ಸಾಯುವ ಮುನ್ನ ಜ್ಞಾನವು ಹಿಂದಿರುಗಿತ್ತು. ಡಾಕ್ಟರುಗಳೆಲ್ಲರೂ ಕೈಬಿಟ್ಟರು. ರಾಮು ಕಣ್ಣಿನ ರೆಪ್ಪೆಯನ್ನು ಮೆಲ್ಲನೆ ಮುಚ್ಚಿ ಸಂಜ್ಞೆಮಾಡಲು ತಲೆಗೆ ತಲೆ ತಾಕುವಷ್ಟು ಬಗ್ಗಿ ಏನೆಂದು ಕೇಳಿದೆ?

ಕೊನೆಯದಾಗಿ ಒಂದು ಮಾತು ನಡೆಸಿಕೊಡುವೆನೆಂದು ಭಾಷೆ ಕೊಡೆಂದ. ಆಗ ಇಲ್ಲವೆನ್ನಲಾಗಲೀ—ಏನೆಂದು ಕೇಳಿ ಚರ್ಚಿಸುವುದ ಕ್ಕಾಗಲೀ ಅದು ಸಮಯವಾಗಿರಲಿಲ್ಲ. ಆಗಲೆಂದೆ. ಭಾಷೆ ಕೊಟ್ಟೆ. ಏನು

ಮಾಡಬೇಕೆಂಬುದು ಹೇಳಿದ. ಕೇಳಿ ನನ್ನ ಶ್ವಾಸವು ಸಿಕ್ಕಿಕೊಂಡಿತು. ಅದು ಮಾತ್ರ ಆಗದೆಂದೆಷ್ಟು ಹೇಳಿದರೂ ಕೇಳದೇ ಒತ್ತಾಯಪಡಿಸಿದ.

"ಲಚ್ಚ್ಯಾ—ನಾನು ನಿನಗಾಗಿಯಾಗಲೀ ಅಥವಾ ನನಗಾಗಿಯಾಗಲೀ ಈ ವಿಷಯಕ್ಕೆ ಮನಸ್ಸು ಮಾಡುತ್ತಿರಲಿಲ್ಲ. ನಾನೀಗ ಉಳಿಯಲಾರೆ-ಸತ್ತು ನನ್ನ ಕಮಲೆ ತಲೆಯಮೇಲೆ ಕಲ್ಲು ಎಳೆಯಲಾರೆ—ಪಾಪ-ಆ ಚಿಕ್ಕ ವಯಸ್ಸಿಗೆ ಅವಳು ನಮ್ಮ ಕ್ರೂರ ಸಮಾಜದ ನೇಗಿಲಿನ ಎತ್ತಾಗದಿರಲೆಂದು ನನ್ನ ಕೊನೆಯ ಆಸೆ.

ಲಚ್ಚ್ಯಾ—ನನ್ನ-ನಿನ್ನ ವ್ಯತ್ಯಾಸವನ್ನು ಕಂಡು ಹಿಡಿಯುವುದು ಅವಳಿಗೆ ಅಸಾಧ್ಯ. ನೀನು ನನ್ನ ಸ್ಥಾನವನ್ನಾಕ್ರಮಿಸಿ, ಅವಳಿಗೆ ಜೀವನವು ಹೊರೆಯಾಗದಂತೆ ನೋಡಿಕೊ. ನಾನು ಪೆಟ್ಟಿಗೆಯಲ್ಲಿಟ್ಟಿರುವ ಕೆಲವು ಕಾಗದಗಳು ನೀನು ನನ್ನಂತೆ ನಟಿಸಲು ಸಾಕಷ್ಟು ಸಹಾಯ ಮಾಡುವು"ವೆಂದ.

ನಾನು ಮಾತಾಡಲಿಲ್ಲ. ಪುನಃ ಅವನು

"ಲಚ್ಚ್ಯಾ—ನನ್ನ ಕಣ್ಣು ಕಾಣದಾಗುತ್ತಿದೆ. ಬೇಗ ಹೇಳು—ಮನಸ್ಸಿಗೆ ಸಮಾಧಾನವಾಗುವಂತೆ ಮಾತು ಕೊಡು" ಎಂದ.

"ಪ್ರಯತ್ನಿಸುತ್ತೇನೆ—ರಾಮೂ" ಎಂದಳುತ್ತ ಮಾತುಕೊಟ್ಟೆ. ಆಹೊತ್ತಿಗಾಗಲೇ ದೀಪವು ನಂದಿಹೋಗಿತ್ತು—ನನ್ನ ಮಾತವನಿಗೆ ಕೇಳಿಸಿತೋ ಇಲ್ಲವೋ?

× × × ×

ಇಂದಿಗೆ ರಾಮೂನ ಅಗಲಿ ಅರ್ಧಪಕ್ಷವಾಗುತ್ತಿದೆ. ನಾನೂ ಅರ್ಧವಾಗಿದ್ದೇನೆ. ಅವನ ಮಾತಿನಂತೆ "ಲಚ್ಚ್ಯಾ—ಕಲಹದ ದೊಂಬಿಯಲ್ಲಿ ಸಿಕ್ಕಿ ಮೃತನಾದನೆಂದು ಊರಿಗೆ ೪-೫ ದಿನಗಳಲ್ಲೇ ಬರುವುದಾಗಿಯೂ ಬರೆದಿದ್ದೆ. ಹೋಗುವುದೇ ದೊಡ್ಡ ಸಮಸ್ಯೆಯಾಗಿತ್ತು.

ಊರಿಗೂ ಹೋಗಿ ಆಯ್ತು. ರಾಮುವಿನಂತೆಯೇ ನಟಿಸಿ ಅವರನ್ನು ಆ ಹಗಲು ಮೋಸಗೊಳಿಸಿದ್ದೂ ಆಯಿತು. ರಾತ್ರಿ ಊಟವಾದ ಮೇಲೆ ರಾಮುವಿನ ಕೊಠಡಿಯಲ್ಲಿ ಕುಳಿತು ಪುಸ್ತಕದ ಹಾಳೆ ತಿರುವಿ ಹಾಕುತ್ತಿದ್ದೆ.

ಯಾರೋ ಕೋಣೆಯೊಳಹೊಕ್ಕು ಬಾಗಿಲು ಹಾಕಿಕೊಂಡು ಒಳಗೆ ಬಂದರು. ಯಾರಿರಬಹುದೆಂದು ಆಗಲೇ ಊಹಿಸಿದ್ದೆ. ಆದರೆ ಕೂಡಲೇ ಮುಖ ನೋಡುವ ಧೈರ್ಯವಾಗಲಿಲ್ಲ. ಮೆಲ್ಲನೆ ತಡೆದು ತಲೆಯೆತ್ತಿ ನೋಡಿದೆ.

ಜ್ಞಾನದೃಷ್ಟಿಯನ್ನಾವರಿಸಿದ್ದ ಮಂದ ಪದರವೊಂದು ಸರಿದು ಬಿದ್ದಂತಾಯಿತು. ಏನು ರೂಪು !!—ರಾಮು ಅಷ್ಟು ಪ್ರೀತಿಸುತ್ತಿರಲು ಅದಕ್ಕೆ ತಕ್ಕಂತೆ ಸದ್ಗುಣಗಳೂ ತುಂಬಿರಬೇಕೆಂದು ಭಾವಿಸಿದೆ. ಅಂದು ರಾಮುವಿನ ಮಾತು ನಡೆಸಿಕೊಡುವುದಸಾಧ್ಯವಾಯಿತು. ಪಾಪ! ಆಕೆ ಸರಸಕ್ಕೆ ಪ್ರಯತ್ನಪಟ್ಟಳು. ನಾನಲ್ಲಿಂದ ಕೂಡಲೇ ಎದ್ದು ದೇಹಾಲಸ್ಯದ ನೋಗು ಹಾಕಿ—ಆಕೆಗೆ ಮಲಗಿಕೊಳ್ಳ ಹೇಳಿ, ಹೊರಗೆ ಹೊರಟೆ.

× × × ×

ಮೂರು ದಿನಗಳೂ ಆಕೆಯನ್ನು ಏನಾದರೊಂದು ನೆವದಿಂದ ದೂರಮಾಡಿದೆ. ಮನಸ್ಸಿನ ಚಿಂತೆ ಪ್ರಬಲವಾಯ್ತು. ಹಿಂದೆ ಎಷ್ಟೋ ಜನ ಪರ ಹೆಂಗಸರ ಜೀವನದಲ್ಲಿ ಲಕ್ಷ್ಯವಿಲ್ಲದೆ ಕಾಲಿಟ್ಟಿದ್ದೆ. ಕೊನೆಗೆ, ಅವರ ಗತಿ ಏನಾಯಿತೆಂದು ವಿಚಾರಿಸುವ ಗೋಜಿಗೂ ಹೋಗಿರಲಿಲ್ಲ. ಆದರೆ ಇಂದು ಸ್ವಂತ ಅಣ್ಣನ ಪತ್ನಿಯ ಬಳಿ ........................ನನ್ನ ಅತ್ತಿಗೆಗೆ ದ್ರೋಹಮಾಡಲೇ................? ಇಲ್ಲಾ ಆ ಕಡೆ ಅಣ್ಣನಿಗೆ ದ್ರೋಹವಾಡಲೇ—ನನಗಾವುದೂ ತೋಚದೆ...............ಕಂಗೆಟ್ಟೆ. ನನ್ನಿಂದ ಆ ಕಾರ್ಯ ಅಸಾಧ್ಯವಾಯ್ತು. ನನ್ನ ಬಾಳಿನ ಅಧಃಪತನವು ಕಣ್ಣಿಗೆ ಕಟ್ಟಿ—ಒಡಲಿನಲ್ಲಿ ಉರಿದು, ತಲೆಯಲ್ಲಿ ಸಿಡಿಯುತ್ತಿತ್ತು. ತಡೆಯಲಾರದೆ ಹೋಗಿ ಕೋಣೆ

ಯಲ್ಲಿ ಆ ರಾತ್ರಿ ಅವರೆದುರಿನಲ್ಲಿ ನಿಂತೆ. ಆಕೆಗೆ ಭಯವಾಯಿ ತೇನೋ! "ಏಕೆ ಹೀಗಿದ್ದೀರಿ?—ನೀವು ಮೊದಲಿನಂತಿಲ್ಲ! ನೀವು ಬೊಂಬಾಯಿಗೆ ಹೋಗಿ, ನಿಮ್ಮ ತಮ್ಮ ಹೋದದ್ದು ಕಂಡು ಹೀಗಾಗಿ ದ್ದೀರಿ—ಡಾಕ್ಟರಿಗೆ ತೋರಿಸಬಾರದೆ"........ಹಾಗೆ ಹೀಗೆ ಏನೇನೋ ಬಹಳ ಆದರದಿಂದ ಮಾತನಾಡುತ್ತ ಬಳಿಯಲ್ಲಿ ಕುಳಿತಳು.

ಮನಬಿಚ್ಚಿ ಎಲ್ಲವನ್ನೂ ಇದ್ದುದಿದ್ದಂತೆ ಹೇಳಿದೆ. ಆಕೆ ನಂಬಲಿಲ್ಲ. ನಾನು ಕಾಡುವ ಬುದ್ಧಿಯಿಂದ ಹಾಗೆ ಹೇಳುತ್ತಿರುವೆನೆಂದು ಭಾವಿಸಿ ಅಪಹಾಸ್ಯ ಮಾಡಿದಳು. ನಾನು ನನ್ನ ಬೆನ್ನಮೇಲಿದ್ದ ಮಚ್ಚೆಯನ್ನು ತೋರಿಸಿದೆ. ಆಕೆ ಬೆಚ್ಚಿಬಿದ್ದು ದೂರಸರಿದು ನಿಂತಳು. "ಹಾಗಾದರೆ ನೀವು ಹೇಳಿದ್ದು ಸತ್ಯವೇ?" ಎಂದಳು. ತಲೆ ತೂಗಿದೆ. ಸರ್ರನೆ ಹೊರಕ್ಕೆ ಹೋಗಿಬಿಟ್ಟಳು. ಇನ್ನು ನಾನು ಬೆಳಿಗ್ಗೆ ತಂದೆತಾಯಿಗಳಿಗೆ ಈ ಸುದ್ದಿ ಹೇಗೆ ತಿಳುಹಿಸುವುದೆಂದು ಯೋಚಿಸುತ್ತ ರಾತ್ರಿ ಕಾಲ ಕಳೆದೆ.

ಬೆಳಿಗ್ಗೆ ನಮ್ಮತ್ತಿಗೆ ಮನೆಯಲ್ಲಿರಲಿಲ್ಲ. ಆ ರಾತ್ರಿಯೇ ಕಲ್ಯಾಣಿ ಯಲ್ಲಿ ಹಾರಿಕೊಂಡು ಪತಿಯನ್ನು ಕೂಡಿಕೊಂಡಿದ್ದಳು.

ಇವೆಲ್ಲ ಸನ್ನಿವೇಶಗಳ ತೊಡಕಿನಲ್ಲಿ ಸಿಕ್ಕಿಬಿದ್ದು ನರಳಬೇಕಾಗಿದ್ದ ನನ್ನ ಬಾಳು ನನಗೆ ಅಸಹ್ಯವಾಯಿತು. ಮುಗಿದರೆ ಲೇಸೆನಿಸಿತು. ಅಂದೇ ನನಗೇ ಹಿಂದೆಂದೂ ಬರದಿದ್ದ ವಿಪರೀತ ಜ್ವರವು ಬಂದಿತು. ತಲೆಯಲ್ಲಿನ ಮೆದುಳಿಗೆ ಯಾರೋ ಕೈಹಾಕಿ ಬಲವಾಗಿ ಕೀಳುತ್ತಿದ್ದಂತೆ ಅತಿಯಾದ ವೇದನೆಯು ಕಾಣಿಸಿತು.

ಆಮೇಲೇನಾಯ್ತೋ ಸ್ವಾಮಿ, ಜ್ಞಾಪಕವಿಲ್ಲ. ಈ ಗ ಂ ತೂ ಇಲ್ಲಿದ್ದೇನೆ. ಹೇಗೆ ಇಲ್ಲಿಗೆ ಬಂದೆನೆನ್ನುವುದು ಸ್ಪಷ್ಟವಾಗಿಲ್ಲ.

ನೋಡಿ, ನನ್ನ ಕಥೆಯಲ್ಲಿ ಏನನ್ನೂ ಮರೆಮಾಚದೆ ಎಲ್ಲವನ್ನೂ ನಿಮಗೆ ಹೇಳಿದ್ದೇನೆ. ನಿಧಾನವಾಗಿ ಯೋಚಿಸಿನೋಡಿ. ಆಗೋ! ನೀವು ಹೊರಡಬೇಕಾದ ಸೂಚನೆ ಬಂತು. ಹೊರಡಿ—ಸ್ವಾಮಿ, ನಾನು ಹೇಳಿದ್ದನ್ನೆಲ್ಲ ಚೆನ್ನಾಗಿ ವಿಚಾರಮಾಡಿ; ಅದು ಹುಚ್ಚನು

ಹೇಳಿದ ಕಥೆಯಲ್ಲವೆಂದು ನಿಮಗೆ ತಿಳಿದು, ನನಗೆ ಹುಚ್ಚು ಹಿಡಿದಿಲ್ಲ ವೆಂಬುದು ಖಂಡಿತವಾದರೆ, ಮತ್ತೊಂದು ದಿನ ದಯವಿಟ್ಟು ಬನ್ನಿ. ನನಗೆ ನಿಮ್ಮಿಂದೇನುಪಕಾರವಾಗಬೇಕಾಗಿದೆ ಎನ್ನುವುದನ್ನು ಆಗ ತಿಳಿಸುತ್ತೇನೆ" ಎಂದನು. ಆತನು ನಾನು ಹೊರಕ್ಕೆ ಹೋಗುವವರೆಗೂ ನನ್ನನ್ನೇ ನೋಡುತ್ತ ನಿಂತಿದ್ದನೆಂದು ನನ್ನ ಮನಸ್ಸಿಗೆ ಹೊಳೆಯಿತು. ನಾನೇನೊ ತಿರುಗಿ ಆತನ ಕಡೆ ನೋಡದಿದ್ದರೂ ಆ ಭಾವನೆಯು ಮಾತ್ರ ಬಲವಾಗಿದ್ದಿತು.

ಇನ್ನೂ, ಇಷ್ಟು ದಿನಗಳಾದಮೇಲೂ ನನಗೆ "ಆತನು ನಿಜ ವಾಗಿ ಹುಚ್ಚನೇ—ಅಲ್ಲವೇ ?" ಎನ್ನುವುದು ಖಂಡಿತವಾಗಿಲ್ಲ. ಆತನು ಎರಡು ದಿನದ ಹಿಂದೆ ಆಸ್ಪತ್ರೆಯಲ್ಲಿ ತೀರಿಹೋದನೆಂದು ವರ್ತಮಾನ ಬಂತು. ಆ ಸುದ್ದಿಯನ್ನು ಕೇಳಿ ಆತನಿಗೆ ನನ್ನಿಂದಾಗಬೇಕಾಗಿದ್ದ ಉಪಕಾರವೇನೆಂಬುದನ್ನು ತಿಳಿಯಬೇಕೆಂದಿದ್ದ ನನ್ನ ಕುತೂಹಲವು ಆಕಸ್ಮಿಕವಾಗಿ ಕೊನೆಗಂಡಿತು. "ಹುಚ್ಚನೇ—ಅಲ್ಲವೇ ?" ಎಂಬ ಪ್ರಶ್ನೆಯು ಮಾತ್ರ ಹಾಗೇ ಉಳಿಯಿತು. ಪ್ರಪಂಚದಲ್ಲಿ ಯಾರು ಹುಚ್ಚರು—ಯಾರು ಅಲ್ಲ ?"



ದೇಶಬಂಧು ಪ್ರೆಸ್, ಕೋಟೆ, ಬೆಂಗಳೂರು ಸಿಟಿ.

# ನೂತನ ಜಗದ್ರಚನೆಯಲ್ಲಿ

# ಕೆಚ್ಚೆದೆಯ ಕಿರಿಯ ಕನ್ನಡಿಗರ ಹಿರಿಯ ಸಾಹಸ !!



ದೇಶದೇಶಾಂತರಗಳ
ಅಂದಂದಿನ ಸುದ್ದಿ ಸಮಾಚಾರಗಳನ್ನು
ಅಂದಂದೇ ಕೊಟ್ಟು ಜನಮನದ
ಪ್ರತಿಬಿಂಬವೆನಿಸಿರುವ
ಅಚ್ಚುಮೆಚ್ಚಿನ

ನಿರ್ಭೀತಿಯ
ನಿಷ್ಪಕ್ಷಪಾತದ
ದಿನಪತ್ರಿಕೆ

## 'ದೇಶಬಂಧು'

(ಸಂಪಾದಕ: ಎ. ಎಸ್. ವೆಂಕೋಬರಾವ್)



ವಿಜ್ಞಾನ ಪ್ರಸಾರಕ
**ಸಪ್ತಾಹಿಕ**

## ದೇಶಬಂಧು

ವಿಶಾಲವಿಶ್ವದ ಸಕಲ ರಂಗಗಳ ಆಗು ಹೋಗುಗಳನ್ನೂ, ಸರಳವಾದ ಶೈಲಿಯಲ್ಲಿ ಆಬಾಲವೃದ್ಧ ಸ್ತ್ರೀ ಪುರುಷರ ಮನಕ್ಕೆ ಹಿಡಿಯುವಂತೆ, ವಿವಿಧ ಲೇಖನಗಳಿಂದ ವರ್ಣಿಸುವ ವೈಶಿಷ್ಟ್ಯಕ್ಕಾಗಿ ಪ್ರತಿಮನೆಯಲ್ಲಿಯೂ ಕಾಣುವ ಏಕೈಕ ವಾರ ಪತ್ರಿಕೆ.

ಸಂಪಾದಕ : ಬಿ. ಎಸ್. ವೆಂಕಟರಾವ್



ರಚನಾತ್ಮಕ, ವಿವಿಧ
ಅಮೂಲ್ಯ ಲೇಖನಾರಂಜಿತ,
ಜಗದ್ವ್ಯವಜನಸ್ತೋಮದ

ಬಾಳಕರವಾಳವೆನಿಸಿದ

## ಛಾಯಾ

(ಮಾಸಪತ್ರಿಕೆ)

ಸಂಪಾದಕ : ಬಿ. ಎಸ್. ವೆಂಕಟರಾವ್

**ಇವು ವ್ಯಾಪಾರ ವಾಣಿಜ್ಯಾಭಿವೃದ್ಧಿಗೂ ಅತ್ಯುತ್ತಮ ಸಾಧನಗಳೆನಿಸಿವೆ.**

ವಿವರಗಳಿಗೆ :—'ದೇಶಬಂಧು' ಕಾರ್ಯಾಲಯ ಕೋಟೆ, ಬೆಂಗಳೂರು ನಗರ.

